# ಸಿದ್ಧಗಂಗಾ

ಜಾತ್ರಾ ವಿಶೇಷ ಸಂಚಿಕೆ



ಭಾರತದ ಪ್ರಜಾಕೋಟಿ ಶ್ರೀಮತಿ ಇಂದಿರಾಗಾಂಧಿಯವರನ್ನು ಮತ್ತೆ ಪ್ರಧಾನಿಯಾಗಿ ಆರಿಸಿದೆ.
ಏಳನೆಯ ಲೋಕಸಭಾ ಚುನಾವಣೆ ಸಂದರ್ಭದಲ್ಲಿ ಶ್ರೀ ಕ್ಷೇತ್ರಕ್ಕೆ ಭೇಟಿಯಿತ್ತು
ಶ್ರೀ ಶ್ರೀ ಗಳವರ ದರ್ಶನಾಶೀರ್ವಾದ ಪಡೆದರು.

ಜನವರಿ, ಫೆಬ್ರವರಿ-1980



# ಶ್ರೀವಾಣಿ

ಇಂದು ಯಾವ ದುರದೃಷ್ಟವೋ ಏನೊ, ಕೆಲವರು ಧರ್ಮದ ಬಗ್ಗೆ ಸಲ್ಲದ ಅಸಡ್ಡೆಯನ್ನು ತೋರಿಸುತ್ತಿದ್ದಾರೆ. ಆ ಶಬ್ದ ಅವರ ಕಿವಿಗೆ ಬಿದ್ದಾಕ್ಷಣ ಅದೊಂದು ಗೊಡ್ಡು ; ಕೆಲಸಕ್ಕೆ ಬಾರದವಸ್ತು.... ಮುಂತಾಗಿ ಅಪಾರ್ಥವನ್ನು ಮನದಲ್ಲಿ ತುಂಬಿಕೊಳ್ಳುತ್ತಾರೆ. ಆದರೆ ಆ ಭಾವನೆಯನ್ನು ದೂರಮಾಡಿ,ಅದರ ಯಥಾರ್ಥವನ್ನು ಪರಿಭಾವಿಸಿ ಬದುಕಿನಲ್ಲಿ ಇಂದು ಅಳವಡಿಸಿಕೊಳ್ಳಬೇಕಾಗಿದೆ. ಮತ್ತು ಅದರ ಬೆಳಕಿನಲ್ಲಿ ಅನೇಕ ಸಾಮಾಜಿಕ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಬೇಕಾಗಿದೆ. ನಮ್ಮ ಆರ್ಯರು 'ಆ ಧರ್ಮ ಶಬ್ದಕ್ಕೆ ನಾನಾ ಅಮೂಲ್ಯಾರ್ಥಗಳನ್ನು ಕೊಟ್ಟಿದ್ದಾರೆ. ಅವುಗಳಲ್ಲಿ 'ಯತೋಽಭ್ಯುದಯ ನಿಶ್ರೇಯಸ ಸಿದ್ಧಿ: ಸಧರ್ಮಃ' 'ಅಭ್ಯುದಯ' ಮತ್ತು 'ನಿಶ್ರೇಯಸ್ಸು' ಎಂಬ ಎರಡು ಅರ್ಥಗಳು ಮುಖ್ಯವಾದವು. ಅದರಲ್ಲಿ ಅಭ್ಯುದಯವೆಂದರೆ ಮಾನವನು, ಅನ್ನ, ಬಟ್ಟೆ, ವಸತಿ ಮುಂತಾದ ಅವಶ್ಯಕ ಅಗತ್ಯತೆಗಳನ್ನು ನ್ಯಾಯಮಾರ್ಗದಲ್ಲಿ ಪೂರೈಸಿಕೊಂಡು, ವ್ಯಕ್ತಿತ್ವದ ಪೂರ್ಣ ವಿಕಾಸವನ್ನು ಹೊಂದಿ, ಅಪರಿಪೂರ್ಣತೆಯಿಂದ ಪರಿಪೂರ್ಣತೆಯತ್ತ ಬಾಳನ್ನು ಸಾಗಿಸಿ ಮಂಗಳವನ್ನು ಕಾಣುವುದು. ಇದು ಧರ್ಮದ ಕೇವಲ ಬಾಹ್ಯಸ್ವರೂಪವಷ್ಟೆ. ಆದರೆ ಇದೇ ಬದುಕಿನ ಚರಮಗುರಿಯಲ್ಲ. ಈ ಲೌಕಿವನ್ನೂ ತಿರಸ್ಕರಿಸದೆ ಮುನ್ನಡೆದು ಆಪರಾತ್ಪರವಸ್ತುವಿನ ಸಾಕ್ಷಾತ್ಕಾರಮಾಡಿಕೊಳ್ಳಬೇಕು. ಅದನ್ನೇ ನಮ್ಮವರು ನಿಶ್ರೇಯಸ್ಸು ಎಂದು ಕರೆದರು. ಅಂತೆಯೆ ಮತ್ತೊಬ್ಬರಿಗೆ ನೋವನ್ನುಂಟುಮಾಡದೆ, ಧರ್ಮದ ಅರ್ಥವನ್ನು ತಿಳಿದುಕೊಂಡು ಅದರಂತೆ ಆಚರಿಸಿದರೆ ಕಲ್ಯಾಣವಾಗುವುದು. ಸರ್ವಧರ್ಮ ಸ್ವಾರಸ್ಯವೂ ಅದೆ ಆಗಿದೆ. ಇದನ್ನು ಸಾವಿರಾರು ವರ್ಷಗಳ ಹಿಂದೆಯೇ ನಮ್ಮ ಆರ್ಯವಾಣಿ ಮೊಳಗಿತು.

ಶ್ರೂಯತಾಂ ಧರ್ಮ ಸರ್ವಸ್ವಂ ಶ್ರುತ್ವಾಚೈವ ಅವಧಾರ್ಯತಾಂ
ಆತ್ಮನಃ ಪ್ರತಿಕೂಲಾನಿ ಪರೇಷಾಂ ನಸಮಾಚರೇತ್ ॥ ಎಂದು.

ಆದ್ದರಿಂದ ನಮ್ಮ ಜನಾಂಗ ಮತ್ತೊಮ್ಮೆ ಧರ್ಮವನ್ನು ಅರ್ಥಮಾಡಿಕೊಂಡು ಅದರ ಬೆಳಕಿನಲ್ಲಿ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುವ ಯತ್ನ ಮಾಡಿದಾಗ ಮಾತ್ರ ಸಮಾಜದಲ್ಲಿ ಶಾಂತಿಮೂಡೀತು

# 'ಸಿದ್ಧಗಂಗಾ'

ಜನವರಿ-ಫೆಬ್ರವರಿ ೧೯೮೦

ಸಂಪುಟ-೧೬ ಸಂಚಿಕೆ-೧-೨

ಪ್ರಕಾಶಕರು

ಹೆಚ್. ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿಸಂಘದ ಪರವಾಗಿ

ಸಂಪಾದಕ ಮಂಡಲಿ

ಪಂ॥ ಚನ್ನಪ್ಪ ಎರೇಸೀಮೆ

ಪಿ. ಎಸ್. ಚಂದ್ರಶೇಖರಯ್ಯ

ವಿರೂಪಾಕ್ಷಯ್ಯ

ಬಸವರಾಜು

ಜಾಹಿರಾತು ವ್ಯವಸ್ಥಾಪಕರು

ಎಂ. ರೇಣುಕಾರಾಧ್ಯ

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

ಆಜೀವ ಸದಸ್ಯತ್ವ: **151-00** ರೂ

ವಾರ್ಷಿಕ ಚಂದಾ: **10-00** ರೂ


## ಈ ಸಂಚಿಕೆಯಲ್ಲಿ



— —

### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು, ಸಣ್ಣಕಥೆ, ಕವನ, ನಗೇಹನಿ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು, ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

"ಸಂಪಾದಕರು"

"ಸಿದ್ಧಗಂಗಾ" [ಕನ್ನಡ ಮಾಸ ಪತ್ರಿಕೆ]

ಶ್ರೀ ಸಿದ್ಧಗಂಗಾ ಕ್ಷೇತ್ರ-572104 ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ವಿನಂತಿ

1980ನೆಯ ಹೊಸ ವರ್ಷದ ನಿಮ್ಮ ಚಂದಾ ನಂಬರ್ ಗುರುತಿಸಿಕೊಳ್ಳಿ. ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ನಿಮ್ಮ ವಿಳಾಸದ ಹಿಂಬದಿ ಇರುವ ಚಂದಾ ನಂಬರ್ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ವ್ಯವಹರಿಸಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ಮುಂದಿನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ಪ್ರಾರ್ಥನೆ.

ಪ್ರಕಾಶಕರು

'ಸಿದ್ಧಗಂಗಾ' ಮಾಸ ಪತ್ರಿಕೆ, ಸಿದ್ಧಗಂಗಾ ಮಠ-572104 ತುಮಕೂರು ಜಿಲ್ಲೆ.

# ಸಂಪಾದಕೀಯ

ಸಾರ್ಥಕ ಜೀವಿಗಳನ್ನು ಸನ್ಮಾನಿಸುವುದರಲ್ಲಿ ಸಾಫಲ್ಯವಡಗಿದೆ.— ಮಾನವ ಕುಲದ ಕಲ್ಯಾಣಕ್ಕಾಗಿ ತಮ್ಮ ಬದುಕಿನ ಪೂರ್ಣ ಅವಧಿಯನ್ನು ಸಮರ್ಪಿಸಿ ಹಣ್ಣಾದ ಪುಣ್ಯಪುರುಷ ಶ್ರೀ ಶ್ರೀ ಡಾ॥ ಶಿವಕುಮಾರ ಮಹಾ ಸ್ವಾಮಿಗಳವರ ಬದುಕೂ ಸಾರ್ಥಕ. ಅವರ ನಿಮಿಷ ನಿಮಿಷಾರ್ಧವು ಸಕಲ ಜೀವಾವಳಿಗಳ ಕ್ಷೇಮ ಚಿಂತನೆಗೆ ಮೀಸಲು. ಅವರ ನಡೆ ಪಾವನ, ನುಡಿ ಪಾವಿತ್ರ್ಯ. ನಡೆ ನುಡಿಗಳ ಸಾಮರಸ್ಯದಿಂದ ಕೂಡಿದ, ಸತ್ವ ಭರಿತ ಸತ್ಯಯುಕ್ತ ಲಿಂಗ ತಪಸ್ಸು ಅವರ ದೈನಂದಿನ ವ್ಯವಹಾರ. ಗಂಧ, ಚಿನ್ನ ತಮ್ಮನ್ನು ಹಿಂಸೆಗೆ ಒಳಗು ಮಾಡಿಕೊಂಡು ಜನಹಿತಕ್ಕಾಗಿ ಲೋಕದ ಸಂತೃಪ್ತಿಗಾಗಿ, ತಮ್ಮಲ್ಲಡಗಿರುವ ಅಂತಃ ಸತ್ವವನ್ನು ಹೊರಗೆಡಹುವಂತೆ, ತಮ್ಮಲ್ಲಡಗಿರುವ ಪರಾತ್ಪರ ಚೈತನ್ಯ ಪ್ರಭೆಯ ಕಾರುಣ್ಯವನ್ನು ಜಗತ್ತಿಗೆ ಅರ್ಪಿಸುತ್ತಿದ್ದಾರೆ. "ಅಣೋರಣೀಯಾನ್ ಮಹತೋ ಮಹೀಯಾನ್' ಎಂಬಂತೆ ಅಣುವಿನಲ್ಲಿ ಅಣು ಮಹತ್ತಿನಲ್ಲಿ ಮಹತ್ತಾದ ಸಕಲ ತಂತ್ರ ಸ್ವತಂತ್ರ ಪರಬ್ರಹ್ಮನ ಸಾಕ್ಷಾತ್ಕಾರಿಗಳು ಹಿಂದಿನಿಂದಲೂ ಆಚರಿಸಿ ತೋರಿಸಿದ ಮಹತ್ ಕಾರ್ಯವನ್ನು ಇಂದು ಸತ್ಯವಾಗಿ ತೋರಿಸಿದ ಶ್ರೀ ಶ್ರೀಗಳವರ ಬದುಕು ಬಿಡಿಸಲಾರದ ಕಗ್ಗಂಟು. ಅರಿಯಲಾರದ ಆಳ. ಉಪಮಿಸಲಾರದ ನಿಲುವು. ಗಮನಿಸಲಾರದ ಗಹನ ಗಂಭೀರ ಪಾರವಾರ. ಶ್ರೀ ಕ್ಷೇತ್ರದ ಗುರು ಪರಂಪರೆಯ ಆಶೀರ್ವಾದದ ವಜ್ರರಕ್ಷೆ, ಅನ್ಯಾದೃಶ ತಪಃ ಪ್ರಭಾವ, ಕಾಲವನ್ನಳೆಯುವ ಯಂತ್ರ ಸಾಧನವನ್ನು ನಾಚಿಸುವ ನಿಯಮಿತ ಕಾರ್ಯಕ್ರಮ. ಈ ಮೂರರ ಮುಪ್ಪುರಿ 'ನಭೂತೋ ನ ಭವಿಷ್ಯತ್ತಿನ ಕಾರ್ಯನಿರ್ವಹಣೆಗೆ ಕಾರಣವಾಗಿದೆ. ಎಪ್ಪತ್ತೆರಡು ವರ್ಷಗಳ ಗಡಿದಾಟಿರುವ ವಿಭೂತಿ ಪುರುಷರಿಗೆ ಇಪ್ಪತ್ತೆರಡರ ಶಕ್ತಿ ಸಂಚಾರ ದೇಹ ಮನಗಳೆರಡಕ್ಕೂ ವಯೋಧರ್ಮದ ವೈಪರೀತ್ಯಗಳು ಈ ಮಹನೀಯರ ಹತ್ತಿರ ಸುಳಿಯಲು ಅಂಜುತ್ತಿವೆ. ಗುರು ಕರ ಕಂಜ ಸಂಜಾತರೆನಿಸಿ ಈ 80 ನೆಯ ಇಸ್ವಿಗೆ 50 ಸಂವತ್ಸರಗಳು ಧನ್ಯತೆಯನ್ನು ಪಡೆದು ಸಂತೃಪ್ತಿಗೊಂಡವು, ಅವು ಅವರ ಪಾಲಿಗೆ 50 ಘಂಟೆಗಳು. ಈ ಐವತ್ತು ವರ್ಷ ವಸಂತಗಳಲ್ಲಿ ಹೊಸ ಸೂರ್ಯನ ಉದಯವಾಯಿತು. ಸಹಸ್ರಾರು ಮುಗ್ಧ ಮಕ್ಕಳ ಮುಖಕಮಲ ಅರಳಿ ಬಾಳಿನಲ್ಲಿ ಬೆಳಕು ಕಂಡವು. ಬೆಳಕು ಕಂಡ ಸಹಸ್ರಾರು ಹೃನ್ಮನಗಳು ಈ ದಿವ್ಯ ಚೇತನರ ಪೂರ್ಣಾನುಗ್ರಹವನ್ನು ಕೃತಜ್ಞತೆಯಿಂದ ಸ್ಮರಿಸಿದವು. ಆ ಕೃತಜ್ಞತೆಯ ಸಾಕಾರ ಸ್ವರೂಪವಾಗಿ, ಐವತ್ತು ಸಂವತ್ಸರಗಳ ಸಾರ್ಥಕ ಸಮಾಜ ಸೇವೆ ಸಲ್ಲಿಸಿದ ಕುರುಹಾಗಿ ಆಚರಿಸಲಿರುವ 'ಸುವರ್ಣ ಮಹೋತ್ಸವ' ಸಾರ್ಥಕ ಜೀವನದ ಕಾರ್ತೀಕೋತ್ಸವ. ನಾಡಿನ ಭಕ್ತ ಸಮೂಹಕ್ಕೊಂದು ಸುಖ ಸಂತೋಷದ ಸಂಭ್ರಮದ ಸಮಾರಂಭ.

ಶಿವಯೋಗಿಗಳವರ ದಿವ್ಯ ದೃಷ್ಟಿ ಅಗಮ್ಯ ಅಗೋಚರ. 1908 ರಲ್ಲಿ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರ ಹುಟ್ಟುಗೊಂಡದ್ದು ಶ್ರೀ ಶ್ರೀಮದುದ್ಧಾನ ಶಿವಯೋಗಿಗಳವರ ಜ್ಞಾನ ಚಕ್ಷುವಿನ ಅರಿವಿಗೆ ನಿಲುಕಿರಬಹುದೇನೋ, ಆ ಮರು ವರ್ಷವೇ ಅಂದರೆ 1909 ರಲ್ಲಿ ಶಿವರಾತ್ರಿಯಂದು ಜನ್ಮ ತಳೆದ ಶ್ರೀ ಸಿದ್ಧಲಿಂಗೇಶ್ವರ ಜಾತ್ರೆಗೂ ಅಗೋಚರ ದೈವೀ ಸಂಬಂಧವಿರಬಹುದು. ತಮ್ಮ ಮಹತ್ತರ ಧ್ಯೇಯೋದ್ದೇಶಗಳ ಹೊಣೆಗಾರಿಕೆಯ ಉತ್ತರವಾಧಿತನ

ನಿರ್ವಹಿಸುವ ಸಮರ್ಥ ಈ ಚೇತನದ ಸುಳುಹು ದಿವ್ಯ ಚಕ್ಷುವಿಗೆ ಪಳಂಚನೆ ಮಿಂಚಿ ಮಾಯಾವಾಯಿತ್ತೇನೋ ಬಲ್ಲವರಾರು ? ಅಂತೂ 1909 ರಲ್ಲಿಯೇ ಅಂಕುರಾರ್ಪಣಗೊಂಡ ಜಾತ್ರಾ ದಾಸೋಹದ ಜೊತೆಗೆ ವಿದ್ಯಾ ಜ್ಞಾನ ದಾಸೋಹಗಳ ತ್ರಿವೇಣೀ ಸಂಗಮ ಸಹಸ್ರಾಧಿಕವಾಗಿ ವ್ಯೋಮೋತೀತವಾಗಿ ಬೆಳೆದು ನಿಂತಿದೆ. ಪ್ರತಿ ಶಿವರಾತ್ರಿಯಂದು 15 ದಿವಸಗಳು ನಡೆಯುವ ಜಾತ್ರೆಯ ಕಾರ್ಯವ್ಯಾಪ್ತಿಯ ವೈಭವ ವರ್ಣನಾತೀತ. ಮಾತುಗಳಿಗೆ ನಿಲುಕದ, ಅನುಭವೈಕವೇದ್ಯವಾದ, ಚಿತ್ತಸಂಸ್ಕಾರ ಗೋಚರವಾದ ಒಂದು ಅನಂತತೆ ಶ್ರೀಕ್ಷೇತ್ರದ ಜಾತ್ರೆಯಲ್ಲಿ ಗೋಚರವಾಗುತ್ತದೆ. ಭಕ್ತ ಭಾವುಕರೂ ಕೊಡುಗೈ ಕಲಿಗಳೂ ತಂತಮ್ಮ ಶಕ್ತಿಗನುಗುಣವಾಗಿ ಈ ಅನಂತತೆಯಲ್ಲಿ ಪಾಲುಗೊಳ್ಳುವರು. ಶಿವರಾತ್ರಿಯ ಜಾತ್ರೆಯನ್ನು ಸ್ಮರಿಸಿಕೊಂಡಾಗ ಅಚಿಂತ್ಯಾದ್ಭುತ ವಿಸ್ಮಯಾನಂದಗಳಲ್ಲಿ ನಮ್ಮತನ ಕರಗಿ ಲೀನವಾಗಿ ಹೋಗುತ್ತದೆ. ಚಿತ್ತವು ವ್ಯೋಮವಿಹಾರಿಯಾಗುತ್ತದೆ. ಮನಸ್ಸು ಪ್ರಫುಲ್ಲವಾಗಿ ಹೊಸ ಕಂಪನ್ನು ಹೊಂದಿ ಧನ್ಯತೆಯನ್ನು ಪಡೆಯುತ್ತದೆ.

ರಾಜಕೀಯ ಒಂದು ಚದುರಂಗದ ಆಟ. ಅದರ ಸೋಲು-ಗೆಲುವು ನಿರ್ಣಯಿಸುವುದು ಕಷ್ಟ. ಆರನೆಯ ಲೋಕಸಭಾ ಚುನಾವಣೆಯಲ್ಲಿ ಪ್ರಚಂಡ ಬಹುಮತವನ್ನು ಪಡೆದು ಅಧಿಕಾರಕ್ಕೆ ಬಂದ ಜನತಾ ಸರಕಾರ ಕೇವಲ ಇಪ್ಪತ್ತೆಂಟು ತಿಂಗಳ ನಂತರ ಅಧಿಕಾರನನ್ನು ಕಳೆದುಕೊಂಡಿತು. ಏಳನೆಯ ಮಧ್ಯಂತರ ಸಾರ್ವತ್ರಿಕ ಲೋಕಸಭಾ ಚುನಾವಣೆ ನಿಜಕ್ಕೂ ಕುತೂಹಲಕಾರಿಯಾಗಿ ಪರಿಣಮಿಸಿತ್ತು. ಭಾರತದ ಪ್ರಜಾಕೋಟಿ ಮತ್ತೊಮ್ಮೆ ಇಂದಿರಾ ಕಾಂಗ್ರೆಸ್ಸಿಗೆ ಜಯದೊರಕಿಸಿಕೊಟ್ಟಿತು. ಕೇವಲ ಮೂವತ್ಮೂರು ತಿಂಗಳ ನಂತರ ಶ್ರೀಮತಿ ಗಾಂಧಿಯವರು ಮತ್ತೆ ಪ್ರಧಾನಿ ಪಟ್ಟವನ್ನು ಅಲಂಕರಿಸಿದರು. ವಿಶ್ವದ ನಾನಾ ದೇಶದ ಮುಖಂಡರು ಅಭಿನಂಧಿಸಿದರು. ಭಾರತದ ಪ್ರಜಾತಂತ್ರತತ್ವವನ್ನು ಮೆಚ್ಚಿಕೊಂಡರು. ನಮ್ಮ ದೇಶದ ಜನತೆಗೆ ಕೇಂದ್ರದಲ್ಲಿ ಸ್ಥಿರ ಸರಕಾರ ಏರ್ಪಟ್ಟಿತು ಎಂಬ ಸಂತೋಷ ಒಂದು ಕಡೆ ಉಂಟಾದರೆ ಬುದ್ಧಿ ಜೀವಿಗಳಿಗೆ ಮತ್ತೊಮ್ಮೆ ತುರ್ತು ಪರಿಸ್ಥಿತಿ ಭೀಕರ ಪರಿಸ್ಥಿತಿ ಎಲ್ಲಿ ಉಂಟಾಗುತ್ತದೆಯೋ ಎಂಬ ಚಿಂತೆ ಮತ್ತೊಂದು ಕಡೆ. ಆದರೆ ಶ್ರೀಮತಿ ಇಂದಿರ ಗಾಂಧಿಯವರು ಮೊನ್ನಿನ ತಮ್ಮ ಚುನಾವಣಾ ಪ್ರಚಾರದಲ್ಲಿ ಮತ್ತೊಮ್ಮೆ ತುರ್ತುಸ್ಥಿತಿಯ ಅತಿರೇಖಗಳು ನಡೆಯದಂತೆ ನೋಡಿಕೊಳ್ಳುವ ಆಶ್ವಾಸನೆಯನ್ನು ಕೊಟ್ಟಿದ್ದಾರೆ. ಅವರ ಬರವಸೆಯನ್ನು ಕಾದು ನೋಡಬೇಕಾಗಿದೆ. ಒಟ್ಟಿನಲ್ಲಿ ಕೇಂದ್ರದಲ್ಲಿ ಅಸ್ಥಿರತೆಯನ್ನು ನಿರ್ನಾಮ ಮಾಡಿದ ಸ್ಥಿರ ಸರಕಾರವನ್ನು ತಂದುಕೊಟ್ಟ ಪ್ರಜಾಸಂಖ್ಯೆ ಹಾಗೂ ಪ್ರಜಾಪ್ರತಿನಿಧಿಗಳಿಗೂ ಅಭಿನಂದನೀಯರು. ಕೇಂದ್ರ ಸರಕಾರವನ್ನನುಸರಿಸಿ ನಮ್ಮ ರಾಜ್ಯದಲ್ಲಿಯೂ ಇಂದಿರಾ ಕಾಂಗ್ರೆಸ್ ಮುಖಂಡರು ಆಡಳಿತ ಸೂತ್ರವಹಿಸಿಕೊಂಡ ತಮ್ಮ ನಾಯಕನೆಂದು ಘೋಷಿಸಿ ಮುಖ್ಯಮಂತ್ರಿಯಾಗಿ ಆಯ್ಕೆಯಾದ ಶ್ರೀ ಆರ್. ಗುಂಡೂರಾವ್‌ರವರಿಗೂ ಪತ್ರಿಕೆಯು ಅಭಿನಂದನೆಯನ್ನು ಸಮರ್ಪಿಸುತ್ತದೆ.

ಬೆಳಗಾವಿಯಲ್ಲಿ ನಡೆದ 4 ದಿವಸಗಳ 52 ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಇದೀಗ ಮುಕ್ತಾಯ ಗೊಂಡಿದೆ. ಸಮ್ಮೇಳನದಲ್ಲಿ ಮಹತ್ವ ಪೂರ್ಣ ನಿರ್ಣಯಗಳು ಅಂಗೀಕರಿಸಲ್ಪಟ್ಟಿವೆ. ಬೆಳಗಾವಿಯು ಕನ್ನಡದ ನೆಲವೆಂಬುದನ್ನು ದೃಢೀಕರಿಸಿದೆ. ರಾಜ್ಯದಲ್ಲಿರುವ ಕೇಂದ್ರ ಕಛೇರಿಗಳಲ್ಲಿ ಮತ್ತು ಬೆಳಗಾವಿ ಮತ್ತು ಕಾಸರಗೋಡುಗಳಲ್ಲಿ ಜನಗಣತಿಗೆ ಕನ್ನಡಿಗ ಅಧಿಕಾರಿಯನ್ನೇ ನೇಮಿಸಬೇಕೆಂದೂ ನಿರ್ಣಯಿಸಿದೆ. ಗಡಿ ಸಮಸ್ಯೆಯ ಇತ್ಯರ್ಥಕ್ಕೆ ಪೂರ್ಣ ಭರವಸೆಯನ್ನು ನೀಡಿದ ಮುಖ್ಯಮಂತ್ರಿಯವರನ್ನು ಸಮ್ಮೇಳನ ಅಭಿನಂದಿಸಿದೆ. ಈ ದಿಸೆಯಲ್ಲಿ ಯಶಸ್ವಿಯಾಗಿ ಸಮ್ಮೇಳನವನ್ನು ನಡೆಸಿದ ಸಾಹಿತ್ಯ ಪರಿಷತ್ತು, ಸ್ವಾಗತ ಸಮಿತಿ ಹಾಗೂ ಸಮ್ಮೇಳದ ಅಧ್ಯಕ್ಷರನ್ನು ಅಭಿನಂದಿಸುತ್ತೇವೆ.

ಜನವರಿ ಮತ್ತು ಫೆಬ್ರವರಿ ಸಂಚಿಕೆಗಳು ಒಟ್ಟಾಗಿ ತಮ್ಮ ಕೈ ಸೇರುತ್ತಿವೆ. ಕಾಲವಿಳಂಬದಿಂದ ಈ ಬದಲಾವಣೆ ಮಾನ್ಯ ಓದುಗರು ಸಹಕರಿಸಬೇಕಾಗಿ ವಿನಂತಿ.



# ನವನೀತ

1. ಇಚ್ಛತಿ ಶತೀ ಸಹಸ್ರಂ ಸಹಸ್ರೀ ಲಕ್ಷಮೀಹತೇ ।
ಲಕ್ಷಾಧಿಪಸ್ತಥಾ ರಾಜ್ಯಂ ರಾಜ್ಯಸ್ಥಃ ಸ್ವರ್ಗಮೀಹತೇ ॥

ನೂರು ರೂಪಾಯಿ ಹಣವುಳ್ಳವನು ಸಾವಿರವನ್ನೂ, ಸಾವಿರವುಳ್ಳವನು ಲಕ್ಷವನ್ನೂ, ಲಕ್ಷಾಧಿಪನು ರಾಜ್ಯವನ್ನು, ರಾಜ್ಯವುಳ್ಳವನು ಸ್ವರ್ಗವನ್ನು ಮೇಲೆ ಮೇಲೆ ಬಯಸುತ್ತಲೇ ಇರುತ್ತಾನೆ. ಆಸೆಗೆ ಮಿತಿಯೆಲ್ಲಿ.

—ಪಂಚತಂತ್ರ.

○ ○

2. ರಮಣೀಯಃ ಸ ಹಿ ಪುರುಷೋ ರಮಣೀ ಯತ್ರೈವ ರಜ್ಯತಿ ವಿದಗ್ಧಾ ।
ಶ್ಲೋಕಃ ಸ ಏವ ಶುಭಗಶ್ಚಿತ್ತಂ ಸಕ್ತಂ ಹಿ ಯತ್ರ ರಸಿಕಸ್ಯ ॥

ಯಾವ ಪುರುಷನಲ್ಲಿ ಚತುರೆಯಾದ ರಮಣಿ ಅನುರಕ್ತಳಾಗಿರುವಳೋ ಅವನೇ ಸುಂದನಾದ ಪುರುಷ. ಯಾವ ಶ್ಲೋಕದಲ್ಲಿ ರಸಿಕನ ಮನಸ್ಸು ನೆಡುತ್ತದೋ ಆ ಶ್ಲೋಕವೇ ಅವನಿಗೆ ರಮಣೀಯವಾದುದು.

ವಿಶ್ವಗುಣಾದರ್ಶ

 

3. ಸಂಕ್ಷೇಪಾತ್ಕಥ್ಯತೇ ಧರ್ಮೋ ಜನಾಃ ಕಿಂ ವಿಸ್ತರೇಣವಃ ।
ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಮ್ ॥

ಎಲೈ ಜನಗಳಿರಾ, ನಿಮಗೆ ಧರ್ಮವನ್ನು ಸಂಕ್ಷೇಪವಾಗಿ ಹೇಳುತ್ತೇನೆ. ಹೆಚ್ಚಾಗಿ ಹೇಳುವುದರಿಂದ ಪ್ರಯೋಜನವೇನು ? ಪರೋಪಕಾರ ಪುಣ್ಯಕ್ಕೂ ಪರರ ಹಿಂಸೆಯು ಪಾಪಕ್ಕೂ ಕಾರಣವಾಗುತ್ತದೆ.

ಪಂಚತಂತ್ರ.

○ ○

# ಅಮೃತ ಬಿಂದು

ಮಾನವನ ನಿರಂತರ ಹೋರಾಟ ತನ್ನ ಅಂತಿಮ ಗುರಿಯ ಕಡೆ ಸಾಗಿರುತ್ತದೆ. ಅವನು ಪರಮ ಅರಿವಿನ ಶಿವಾನುಭಾವವನ್ನು ಅರಸುವಂತೆ, ಆದರ್ಶವಾಗಿ ಬಾಳಿ ಬದುಕುವ ಮಾರ್ಗವನ್ನು ಅರಸುತ್ತಿರುತ್ತಾನೆ ಅಂದಮೇಲೆ ಉತ್ತಮ ಆದರ್ಶ ಬಾಳು ಬಾಳಲು ಅವನು ಮಾಡುವ ಪ್ರಯತ್ನವೆಲ್ಲವೂ ದೈವ ಪ್ರೇರಿತವೇ. ಪ್ರತ್ಯಗಾತ್ಮನೆನಿಸಿದ ಯಾವ ಜೀವಾತ್ಮನು, ದೇಹ ಧಾರಿಯಾಗಿ ಪ್ರಬಲ ಹೋರಾಟವನ್ನು ನಡೆಸಿ ಮೂಲ ವಸ್ತುವಿನಲ್ಲಿ ಲೀನಗೊಳ್ಳುವ ಮಹದಿಚ್ಛೆಯು ಸಾಧಿತವಾಗಬೇಕಾದರೆ ಉತ್ತಮವಾದ ಸಾಧಕ ಮಾರ್ಗಧ ಅವಶ್ಯಕವಿದೆ. ಆ ಮಾರ್ಗವೇ ಧರ್ಮಮಾರ್ಗ. ಇದನ್ನೇ ಮೋಕ್ಷಮಾರ್ಗವೆಂದೂ ಹಿಂದೂ ಧರ್ಮ ಶಾಸ್ತ್ರಗಳು ಕರೆದಿವೆ. ಈ ಮೋಕ್ಷ ಸಿದ್ಧಿಯೆ ಹಿಂದೂ ಧರ್ಮ ಹಾಗೂ ಸಂಸ್ಕೃತಿಯ ತಿರುಳು. ಹಾಗೂ ಅಂತಿಮ ಗುರಿ ಅನೇಕ ವೈವಿದ್ಯ ವೈಶಿಷ್ಟ್ಯಪೂರ್ಣ. ಈ ಹಿಂದೂ ಧರ್ಮವೆಂಬ ಮಣಿ ಹಾರದಲ್ಲಿ ವಿಶ್ವೋತ್ತೀರ್ಣನೂ, ಅನಾದ್ಯನಂತನೂ, ಸರ್ವಶಕ್ತನೂ, ಆದ ಪರಶಿವನ ಕಲ್ಪನೆಯ ಸೂತ್ರ ಎಲ್ಲರನ್ನು ಬಂಧಿಸಿದೆ. ಆ ಪರಶಿವನ ಒಟ್ಟಾರೆ ಉಪಾಸನೆಯು ಸಮಗ್ರಭಾರತದ ಭಾವೈಕ್ಯತೆಯನ್ನು ಕಾಪಾಡಿಕೊಂಡು ಬರಲು ಸಹಾಯ ವಾಗುತ್ತದೆ.

—ದುಂಬಿ

# "ಸಿದ್ಧಗಂಗಾ ಶ್ರೀ" ಸಂಭಾವನಾ ಗ್ರಂಥದ ಕಿರುಪರಿಚಯ

ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರು 50 ವರ್ಷಗಳಿಂದಲೂಅವ್ಯಾಹತವಾಗಿ ಎಸಗಿರುವ ಮತ್ತು ಎಸಗುತ್ತಿರುವ ಬಹುಮುಖವಾದ ಸಮಾಜ ಸೇವೆಯನ್ನು ಮನಗಂಡ ಎಲ್ಲವರ್ಗದ ಭಕ್ತಕೋಟಿ, ತನ್ನ ಕೃತಜ್ಞತೆಯನ್ನು ಸಮರ್ಪಿಸುವುದರ ಸಂಕೇತವಾಗಿ 1980 ನೆಯ ಇಸ್ವಿಯಲ್ಲಿ "ಸುವರ್ಣ ಮಹೋತ್ಸವ"ವನ್ನು ಪೂಜ್ಯಪಾದರ ಘನತೆ, ಗೌರವಗಳಿಗೆ ತಕ್ಕಂತೆ ಆಚರಿಸಬೇಕೆಂಬ ಸಂಕಲ್ಪ ತಾಳಿರುವುದು ಈಗಾಗಲೆ ವಿದಿತವಾಗಿದೆ. ಆ ಒಂದು ಶುಭ ಸಂದರ್ಭದಲ್ಲಿ ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿ ಬಳಗವು, ಸಿದ್ಧಗಂಗಾ ಶ್ರೀ ಎಂಬ ಸಂಭಾವನಾ ಸಂಪುಟವನ್ನು ಅರ್ಪಿಸಬೇಕೆಂದು ಉದ್ದೇಶಿಸಿ ಸಿದ್ಧತೆಗಳು ಭರದಿಂದ ಸಾಗುತ್ತಿವೆ. ಆ ಯೋಜನೆಯನ್ವಯ ಡಾ॥ ಶ್ರೀ ಸಿದ್ಧಯ್ಯ ಪುರಾಣಿಕರವರ ಅಧ್ಯಕ್ಷತೆಯಲ್ಲಿ, ಶ್ರೀ ಪಂಡಿತ ಚನ್ನಪ್ಪ ಎರೇಸೀಮೆ ಮತ್ತು ಶ್ರೀ ಟಿ. ಆರ್. ಮಹಾದೇವಯ್ಯನವರ ಪ್ರಧಾನ ಸಂಪಾದಕತ್ವದಲ್ಲಿ ಗ್ರಂತದ ಮುದ್ರಣ-ಕಾರ್ಯನಡೆಯುತ್ತಿದೆ.

ಸಿದ್ಧಗಂಗಾಶ್ರೀಯ ಆಕಾರ–ಸ್ವರೂಪಾದಿಪರಿಚಯ: — ಈ ಸಂಭಾವನಾಗ್ರಂಥವು ¼ಡೆ ಮ್ಮಿ ಆಕಾರವನ್ನು ಹೊಂದಿದ್ದು, ಸುಮಾರು1200 ಪುಟಗಳುಳ್ಳ ಬೃಹದ್‌ಗ್ರಂಥವಾಗಿದೆ. ಅದರಲ್ಲಿ "ಕ್ಷೇತ್ರಶ್ರೀ" "ದರ್ಶನಶ್ರೀ" "ಸಾಹಿತ್ಯಶ್ರೀ" ಮತ್ತು "ಕಲಾಶ್ರೀ' ಎಂಬ ನಾಲ್ಕು ಭಾಗಗಳಿರುತ್ತವೆ. ಅದರಲ್ಲಿ ಮೊದಲನೆಯದಾದ"ಕ್ಷೇತ್ರಶ್ರೀ" ಭಾಗದಲ್ಲಿ ಶ್ರೀಸಿದ್ಧಗಂಗಾ ಕ್ಷೇತ್ರದ ಇತಿಹಾಸ, ಪರಿಸರ-ಅದರಮಹತ್ತ್ವ, ಕ್ಷೇತ್ರದ ಗುರುಪರಂಪರೆ ಇತ್ಯಾದಿಗಳ ದೀರ್ಘವಿಚಾರವಿದ್ದು, ಶ್ರೀ-ಅಟವೀಸ್ವಾಮಿಗಳ, ಶ್ರೀಮದುದ್ದಾನ ಶಿವಯೋಗಿಗಳ, ಹಾಗೂ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಜೀವನ ಚರಿತ್ರೆಯನ್ನೊಳಗೊಂಡ ವಿಚಾರ ಪರಿಪ್ಲುತವಾದ ಲೇಖನಗಳಿವೆ. ಮತ್ತು ಕಡೆಯಲ್ಲಿ ನಾಡಿನ ಸುಪ್ರಸಿದ್ಧ ಕವಿಗಳೂ ಶ್ರೀಕ್ಷೇತ್ರವನ್ನು ಹಾಗೂ ಶ್ರೀ ಶ್ರೀಗಳವರನ್ನು ಕುರಿತು ಬರೆದ ಕವನಗಳಿರುತ್ತವೆ. ಎರಡನೆಯದಾದ "ದರ್ಶನಶ್ರೀ" ವಿಭಾಗದಲ್ಲಿ ಭಾರತೀಯ ಮತ್ತು ಇತರ ಎಲ್ಲ ದರ್ಶನಗಳ ಸಾಮಾನ್ಯ ಪರಿಚಯ ಹಾಗೂ ವೀರ-ಶೈವ ದರ್ಶನದ ವಿಶೇಷ ವಿಚಾರವು ಅಡಕಗೊಂಡಿರುತ್ತದೆ. ಮುಂದಿನ "ಸಾಹಿತ್ಯ ಶ್ರೀ" ಭಾಗದಲ್ಲಿ ವೀರಶೈವ ಸಾಹಿತ್ಯದ ಸಮಗ್ರ ನೋಟ ಇದೆ. ಕೊನೆಯದಾದ "ಕಲಾಶ್ರೀ" ಯಲ್ಲಿ ಸಂಗೀತ, ನಾಟಕ, ನೃತ್ಯ, ಮುಂತಾದ ಕಲೆಗಳಿಗೆ ಶಿವಶರಣರ ಕೊಡುಗೆಯನ್ನು ಕುರಿತ ವಿವೇಚನಾತ್ಮಕ ಪ್ರಬಂಧಗಳಿವೆ.

ಶ್ರೀಕ್ಷೇತ್ರಕ್ಕೆ ಸಂಬಂಧಪಟ್ಟ ಮತ್ತು ಶ್ರೀ ಶ್ರೀಗಳವರಿಗೆ ಸಂಬಂಧಿಸಿದ ನೂರಾರು ಸುಂದರ ಭಾವ ಚಿತ್ರಗಳನ್ನು ಒಳಗೊಂಡಿರುವುದು ಈ ಗ್ರಂಥದ ಮತ್ತೊಂದು ವೈಶಿಷ್ಟ್ಯವಾಗಿದೆ.

ಇಂಥ ಈ ಗ್ರಂಥವನ್ನು ಹೊರತರಲು ಸುಮಾರು ಎರಡೂವರೆಲಕ್ಷ ರೂಪಾಯಿಗಳ ವೆಚ್ಚವನ್ನು ಅಂದಾಜು ಮಾಡಲಾಗಿದೆ. ಆದ್ದರಿಂದ ಕಾಗದ ಮುದ್ರಣಾದಿ ಖರ್ಚು ವೆಚ್ಚಗಳು ಗಗನಕ್ಕೇರಿರವುದರಿಂದ ಈ ಕಾಲದಲ್ಲಿ ಗ್ರಂಥಕ್ಕೆ 150 ರೂಪಾಯಿಗಳ ಬೆಲೆಯನ್ನು 'ಪ್ರತಿ' ಯೊಂದಕ್ಕೆ ಅನಿವಾರ್ಯವಾಗಿ ಗೊತ್ತುಪಡಿಸಲಾಗಿರುತ್ತೆ. ಆದರೆ ಪ್ರತಿಗಳನ್ನು ಮುಂಗಡವಾಗಿ ಕಾದಿರಿಸುವ ಸಾರ್ವಜನಿಕರಿಗೆ 100 ರೂಪಾಯಗಳನ್ನೂ, ಶ್ರೀಕ್ಷೇತ್ರದ ಹಳೆಯ ವಿದ್ಯಾರ್ಥಿಗಳಿಗೆ 75 ರೂಪಾಯಿಗಳನ್ನೂ ಪಡೆದು ಕೊಂಡು ಪ್ರತಿಗಳನ್ನು ಕಾದಿರಿಸುವಂತೆ ಸಂಘವು ನಿರ್ಣಯಿಸಿರುತ್ತದೆ. ಪ್ರಯುಕ್ತ ಮುಂಗಡವಾಗಿ ಪ್ರತಿಗಳನ್ನು ಕಾದಿರಿಸ ಬಯಸುವವರು 1980ನೆಯ ಮಾರ್ಚಿ ಮಾಹೆಯ ಅಂತ್ಯದೊಳಗಾಗಿ— ಕಾರ್ಯದರ್ಶಿಗಳು; ಹಳೆಯ ವಿದ್ಯಾರ್ಥಿಗಳ; ಸಂಘ ಶ್ರೀ ಸಿದ್ಧಗಂಗಾ; ತುಮಕೂರು ಜಿಲ್ಲಾ- 572104—ಈ ವಿಳಾಸಕ್ಕೆ ಎಂ. ಒ. ಅಥವಾ ಚೆಕ್ ಅಥವಾ ಡಿ. ಡಿ. ಮುಖಾಂತರ ಹಣವನ್ನು ಕಳುಹಿಸಿ ತಮ್ಮ ಪ್ರತಿಗಳನ್ನು ಕಾದಿರಿಸಿಕೊಳ್ಳಬೇಕಾಗಿ ಪ್ರಾರ್ಥನೆ.

—



# ಪೂರ್ಣ : ಸೂರ್ಯಗ್ರಹಣ

—ಕ್ಯಾಪ್ಟನ್ ಎಂ. ಜಿ. ಕೆ. ಮೂರ್ತಿ

1980ನೇ ಫೆಬ್ರವರಿ 16ರಂದು ಭಾರತದಲ್ಲಿ ಕಾಣಬರುವ ಪೂರ್ಣ ಸೂರ್ಯಗ್ರಹಣವನ್ನು ವೀಕ್ಷಿಸಲು ವಿದೇಶಗಳಿಂದ ಸುಮಾರು 50 ಖಗೋಳ ಶಾಸ್ತ್ರಜ್ಞರೂ, ಸುಮಾರು 3 ಸಾವಿರ ಮಂದಿ ಹವ್ಯಾಸಿಗಳೂ ಆಗಮಿಸುವ ನಿರೀಕ್ಷೆ ಇದೆ. ಪಶ್ಚಿಮ ಕರಾವಳಿಯ ಕಾರವಾರದಿಂದ ಬಂಗಾಳ ಕೊಲ್ಲಿಯ ಸಮೀಪದ ಪುರಿಯವರೆಗಿನ 120 ಕಿ. ಮೀ. ಅಗಲದ ಪ್ರದೇಶದಲ್ಲಿ ಕಾಣುವ ಗ್ರಹಣವನ್ನು ವೀಕ್ಷಿಸಿ ಸೂರ್ಯನ ಹೊರವಲಯದ ವಾತಾವರಣದ ಸೂಕ್ಷ್ಮ ವಿಚಾರಗಳನ್ನು ಈ ಭೌತಶಾಸ್ತ್ರಜ್ಞರು ತಿಳಿದುಕೊಳ್ಳಬಹುದಾಗಿದೆ. ಹಿಂದೆಯೂ ಪೂರ್ಣಗ್ರಹಣವನ್ನು ವೀಕ್ಷಿಸಲು ಅನೇಕ ಉತ್ಸಾಹಿ ವಿಜ್ಞಾನಿಗಳು ಸಾವಿರಾರು ಮೈಲು ಪ್ರಯಾಣಮಾಡಿ ನಾನಾ ಸಂಕಷ್ಟಗಳನ್ನೆದುರಿಸಿದ್ದರು. 1870 ರಲ್ಲಿ ಆಲ್ಜಿಯರ್ಸ್‌ನಲ್ಲಿ ಗ್ರಹಣ ಸಂಭವಿಸಲಿದ್ದಾಗ ಫ್ರೆಂಚ್ ವಿಜ್ಞಾನಿ ಜಾನ್‌ಸನ್ ಪ್ಯಾರಿಸ್‌ನೊಳಗಿದ್ದ ಶತ್ರುಗಳು ಇಡೀ ನಗರವನ್ನು ಮುತ್ತಿಗೆ ಹಾಕಿ ನಗರದಿಂದ ಹೊರಗೆ ಯಾರೂ ಹೋಗದಂತೆ ಮಾಡಿದ್ದರು. ಜಾನ್‌ಸನ್ ತನ್ನ ವೀಕ್ಷಣೆಗೆ ಬೇಕಾಗಿದ್ದ ಸಲಕರಣೆಗಳನ್ನು ಕಟ್ಟಿಕೊಂಡು, ಬಲೂನಿನ ಮೂಲಕ ಹಾರಿ, ಶತ್ರುಪಾಳ್ಯದ ಆಚೆ ಪಾರಾಗಿ, ವೀಕ್ಷಣೆಯನ್ನು ನಡೆಸಿದ.

ಸೂರ್ಯಗ್ರಹಣ ಅನಾದಿಕಾಲದಿಂದಲೂ ಸಂಭವಿಸಿದೆ. ಬೈಬಲ್‌ನಲ್ಲಿಯ ಇದರ ಉಲ್ಲೇಖವಿದೆ. ಅನೇಕ ಜನರಿಗೆ ಗ್ರಹಣವೆಂದರೆ ಒಂದು ಬಗೆಯ ಅಂಜಿಕೆ ಮೂಢ ನಂಬಿಕೆಗಳೂ, ಕಟ್ಟುಕತೆಗಳೂ ಇವೆ. ರಾಹು, ಕೇತುಗಳು ಸೂರ್ಯ, ಚಂದ್ರರನ್ನು ನುಂಗತೊಡಗಿ ಕುಂದಿಸುವುದರಿಂದ ಗ್ರಹಣಗಳುಂಟಾಗುತ್ತವೆಂಬುದು ಮುಗ್ಧ ಜನರ ನಂಬಿಕೆ. ಸೂರ್ಯಗ್ರಹಣವಾಗಲು ಸೂರ್ಯ, ಚಂದ್ರ, ಭೂಮಿ ಒಂದೇ ಸರಳ ರೇಖೆಯಲ್ಲಿರುವುದು ಅವಶ್ಯಕ. ಚಂದ್ರನ ನೆರಳು ಭೂಮಿಯ ಮೇಲೆ ಬಿದ್ದು, ಚಂದ್ರನು ಸೂರ್ಯನನ್ನು ಮರೆಮಾಡಿದಾಗ ಭೂಮಿಗೆ ಸೂರ್ಯನ ಕೆಲವು ಭಾಗವು ಉಡುಗಿಹೋದಂತೆ ಕಾಣಿಸುತ್ತದೆ, ಇದೇ ಸೂರ್ಯಗ್ರಹಣ. ಇಂಥದೊಂದು ಗ್ರಹಣ ಪ್ರತಿ ವರ್ಷವೂ ಜಗತ್ತಿನ ಯಾವುದಾದರೊಂದು ಭಾಗದಲ್ಲಿ ಕಾಣಿಸುತ್ತದೆ. ಇದು ಸಾಧಾರಣ ಗ್ರಹಣ; ಪೂರ್ಣಗ್ರಹಣವಲ್ಲ.

ಎಲ್ಲ ಸೂರ್ಯಗ್ರಹಣಗಳಲ್ಲೂ ಸೂರ್ಯಬಿಂಬ ಸಂಪೂರ್ಣವಾಗಿ ಅದೃಶ್ಯವಾಗುವುದಿಲ್ಲ. ಕೆಲವು ಗ್ರಹಣಗಳಲ್ಲಿ ಸೂರ್ಯ ಬಿದಿಗೆಯ ಚಂದ್ರ ಅಥವಾ ಅಷ್ಟಮಿಯ ಚಂದ್ರನಂತಾಗುತ್ತದೆ. ಕೆಲವು ಗ್ರಹಣಗಳಲ್ಲಿ ಮಾತ್ರ ಸೂರ್ಯ ಸಂಪೂರ್ಣವಾಗಿ ಮುಚ್ಚಿಹೋಗಿ ಕಗ್ಗತ್ತಲು ಕವಿಯುತ್ತದೆ. ಸಂಜೆಯಂಥ ನಸುಗತ್ತಲು ಎಲ್ಲೆಲ್ಲೂ ಮುಸುಕುತ್ತದೆ. ಹಗಲಿನ ಬೆಳಕು ಆಗ 100,000 ದಷ್ಟು ಕಡಿಮೆಯಾಗಿ ಬಿಡುತ್ತದೆ. ಇಂಥ ಗ್ರಹಣಕ್ಕೆ ಪೂರ್ಣ ಸೂರ್ಯಗ್ರಹಣವೆಂದು ಹೆಸರು.

ಸೂರ್ಯ, ಚಂದ್ರ ಮತ್ತು ಭೂಮಿ ಮೂರೂ ಒಂದೇ ಸರಳರೇಖೆಯಲ್ಲಿರುವಾಗ, ಚಂದ್ರನ ನೆರಳು ಶಂಕುವಿನಾಕಾರದಲ್ಲಿ ಭೂಮಿಯ ಮೇಲೆ ಬೀಳುವ ಸ್ಥಳವು ಪೂರ್ಣ ಛಾಯಾ ಪ್ರದೇಶವಾಗಿ ಅಲ್ಲಿ ಮಾತ್ರ ಪೂರ್ಣ

ಗ್ರಹಣ ಸಂಭವಿಸುತ್ತದೆ. ಈ ಪ್ರದೇಶ 100–150 ಕಿ.ಮೀ. ನಷ್ಟು ಮಾತ್ರ ವಿಸ್ತಾರವಾಗಿರುತ್ತದೆ. ಆ-ಸ್ಥಳದಲ್ಲಿ ಮಾತ್ರ ಪೂರ್ಣಗ್ರಹಣ ಗೋಚರಿಸುತ್ತದೆ. ಅರ್ಧ ಛಾಯಾ ಪ್ರದೇಶವು ಇದರ ಸುತ್ತಲೂ ಸುಮಾರು 2000 ಕಿ.ಮೀ. ಗಳಷ್ಟು ಅಗಲವಾಗಿರುತ್ತದೆ. ಅಲ್ಲಿ ಪಾರ್ಶ್ವ ಗ್ರಹಣವು ಕಂಡುಬರುತ್ತದೆ.

ಸಂಪೂರ್ಣ ಸೂರ್ಯಗ್ರಹಣ ಸಂಭವಿಸುವುದು ಅಸಾಧಾರಣ. ಕ್ರಿ.ಪೂ. 2137 ಅಕ್ಟೋಬರ್ 22 ರಂದು ಚೀನಾದಲ್ಲಿ ಪೂರ್ಣ ಸೂರ್ಯಗ್ರಹಣ ಉಂಟಾಗಿತ್ತು. ಚೀನಾ ರಾಜನ ಆಸ್ಥಾನದಲ್ಲಿದ್ದ ಇಬ್ಬರು ಖಗೋಳಶಾಸ್ತ್ರಜ್ಞರು ಅದನ್ನು ಮುಂಚಿತವಾಗಿ ತಿಳಿಸಲಿಲ್ಲವೆಂದು ಅವನು ಅವರ ಶಿರಚ್ಛೇದನೆಯನ್ನು ಮಾಡಿಸಿದ್ದನಂತೆ! ಕುರುಕ್ಷೇತ್ರ ಯುದ್ಧದ 14ನೇ ದಿನ ಪೂರ್ಣಗ್ರಹಣ ಬಂದಿತ್ತೆಂದು ಪೌರಾಣಿಕ ಉಲ್ಲೇಖವಿದೆ. 1870 ರಲ್ಲಿ ಆಲ್ಜಿಯರ್ಸ್‌ನಲ್ಲಿ 1898 ಜನವರಿ 22 ರಲ್ಲಿ, 1914 ಆಗಸ್ಟ್ 21 ರಲ್ಲಿ ಬಲೂಚಿಸ್ಥಾನದಲ್ಲಿ, 1954 ಜೂನ್ 30ರಲ್ಲಿ ರಾಜಸ್ತಾನದಲ್ಲಿ, 1970ರಲ್ಲಿ ಮೆಕ್ಸಿಕೋದಲ್ಲಿ, ಇನ್ನೂ ಕೆಲವೆಡೆ ಪೂರ್ಣ ಸೂರ್ಯಗ್ರಹಣಗಳಾಗಿದ್ದವು. 1980 ಫೆಬ್ರುವರಿ 16 ರಂದು ಪೂರ್ಣಗ್ರಹಣವು ಗೋಚರಿಸುವುದು. ಈ ಶತಮಾನದಲ್ಲಿ ಭಾರತದಲ್ಲಿ ಇಂಥ ಇನ್ನೂ ಎರಡು ಪೂರ್ಣ ಗ್ರಹಣಗಳು ಸಂಭವಿಸುವುವು—1995 ಅಕ್ಟೋಬರ್ 24 ರಂದು ಕಲ್ಕತ್ತಾದಲ್ಲಿ ಮತ್ತು 1999 ಆಗಸ್ಟ್ 11 ರಂದು ಅಹಮದಾಬಾದ್‌ನಲ್ಲಿ. ಕರ್ನಾಟಕದ ಹುಬ್ಬಳ್ಳಿ. ರಾಯಚೂರ್, ಅಂಕೋಲಾ, ಗದಗ್‌ಗಳಲ್ಲಿ ಪುನಃ ಪೂರ್ಣಗ್ರಹಣ ಕಾಣಲು ಸುಮಾರು 360 ವರ್ಷಗಳು ಬೇಕು. ಆದ್ದರಿಂದ ಮುಂದಿನ ವರ್ಷ ಫೆಬ್ರುವರಿ 16 ರಂದು ಕಾಣಿಸುವ ಪೂರ್ಣ ಸೂರ್ಯಗ್ರಹಣ ಬಹು ಮುಖ್ಯವಾದುದೆಂದು ಗಣಿಸಲ್ಪಟ್ಟಿದೆ. 2053 ನೇ ಸೆಪ್ಟೆಂಬರ್ 12 ರಂದು ಸಂಭವಿಸುವ ಪೂರ್ಣಗ್ರಹಣ ಬೆಂಗಳೂರಿನಲ್ಲಿ ಕಾಣಿಸುವುದು.

ಭೂಮಿ ಮತ್ತು ಚಂದ್ರ ಎರಡೂ ಚಲಿಸುವುದರಿಂದ ಪೂರ್ಣಛಾಯಾ ಪ್ರದೇಶವು ಭೂಮಿಯ ಮೇಲೆ ಸ್ಥಳಾಂತರವಾಗುತ್ತಾ ಹೋಗುವುದು, ಹೀಗೆ ಚಲಿಸುವ ನೆರಳಿನ ಪಥಕ್ಕೆ " ಪೂರ್ಣತೆಯ ಪಥ " ಎಂದು ಹೆಸರು. 1980 ಫೆಬ್ರುವರಿ 16 ರಂದು ಬರುವ ಗ್ರಹಣದ ಪೂರ್ಣತೆಯ ಪಥ" ಅಟ್ಲಾಂಟಿಕ್ ಸಾಗರದ ಮಧ್ಯ ಭಾಗದಿಂದ ಆರಂಭಿಸುವುದು. ಅಲ್ಲಿ ಗ್ರಹಣ ಹಿಡಿದ ಸೂರ್ಯನೇ ಉದಯಿಸುತ್ತಾನೆ. ಪಥವು ಮುಂದೆ ಆಫ್ರಿಕದ ಪಶ್ಚಿಮ ತೀರದ ಮೂಲಕ ಖಂಡವನ್ನು ಪ್ರವೇಶಿಸಿ ಪೂರ್ವತೀರವನ್ನು ತಲಪುತ್ತದೆ. ಆಗ ಸೂರ್ಯ ನೆತ್ತಿಯ ಮೇಲೆ ಬಂದು ಗ್ರಹಣ ಅತ್ಯಂತ ಹೆಚ್ಚು ಕಾಲ (4 ನಿಮಿಷಗಳು) ವಿರುತ್ತದೆ. ಮುಂದೆ ಪಥ ಅರಬ್ಬೀ ಸಮುದ್ರವನ್ನು ದಾಟಿ ಭಾರತದ ಪಶ್ಚಿಮ ತೀರಕ್ಕೆ ಮಧ್ಯಾಹ್ನ 3·40 ಕ್ಕೆ ಬರುತ್ತದೆ. ಕಾರವಾರದಿಂದ ಮುಂದೆ ಅಂಕೋಲಾ, ಹುಬ್ಬಳ್ಳಿ, ಧಾರವಾಡ, ಗದಗ್, ರಾಯಚೂರ್, ಮಹಬೂಬ್ ನಗರ, ಕೋರಾಪುಟ್, ಬರ್ಹಾಂಪುರ, ಪುರಿ, ಭುವನೇಶ್ವರದ ಮೂಲಕ ಬಂಗಾಳಾಕೊಲ್ಲಿಗೆ ಬಂದು ಬಾಂಗ್ಲಾ ದೇಶದ ಚಿಟ್ಟಗಾಂಗ್, ಪೂರ್ವ ಭಾರತ, ಬರ್ಮಾದ ಮಾರ್ಗವಾಗಿ ದಕ್ಷಿಣ ಚೀನದಲ್ಲಿ ಕೊನೆಗಾಣುತ್ತದೆ. ಅಲ್ಲಿ ಗ್ರಣ ಹಿಡಿದ ಸೂರ್ಯನು ಅಸ್ತಮಿಸುವುದು ಕಾಣುತ್ತದೆ.

22-1-1898 ರಂದು ಪೂರ್ಣ ಗ್ರಹಣವು ಮಹಾರಾಷ್ಟ್ರ ಮತ್ತು ಮಧ್ಯ ಭಾರತದ ಮೂಲಕ ಹಾದು ಹೋದಾಗ ಭಾರತೀಯ ಖಗೋಳಜ್ಞರ ತಂಡವೊಂದು ವೈಜ್ಞಾನಿಕ ವೀಕ್ಷಣೆಯನ್ನು ನೆರವೇರಿಸಿತು. 21-8-1914 ರಂದು ಬಲೂಚಿಸ್ಥಾನದಲ್ಲಿ ಆದ ಗ್ರಹಣವೂ, 30-6-1954 ರಂದು ರಾಜಸ್ತಾನದಲ್ಲಿ ಆದ ಗ್ರಹಣವೂ ಸೂರ್ಯಾಸ್ತದ ವೇಳೆಗೇ ಸಂಭವಿಸಿದವು. ಆದ್ದರಿಂದ ಮತ್ತು ಮರುಭೂಮಿಯ ದೂಳು ಹೆಚ್ಚಾಗಿದ್ದುದರಿಂದ ವೈಜ್ಞಾನಿಕ ವೀಕ್ಷಣೆ ಅಶಕ್ಯವಾಯಿತು. ಮುಂದಿನ ಫೆಬ್ರವರಿ 16 ರ ಗ್ರಹಣ ಈ ಶತಮಾನದಲ್ಲೇ ಭಾರತದಲ್ಲಿ ಮೊಟ್ಟ ಮೊದಲ ವೀಕ್ಷಣೆಗೆ ಸೌಕರ್ಯ ನೀಡಿದೆ. ಫೆಬ್ರವರಿಯಲ್ಲಿ ಹವಾಮಾನವೂ ವೀಕ್ಷ ವೀಕ್ಷಣೆಗೆ ಪ್ರಶಸ್ತವಾಗಿದೆ.

**ವಿಚಿತ್ರ ಅನುಭವಗಳು:-**

ಪೂರ್ಣ ಗ್ರಹಣದ ದೃಶ್ಯ ಅಪರೂಪ, ಮಟಮಟ ಮಧ್ಯಾಹ್ನದಲ್ಲೇ ಏಕಾ ಏಕಿ ಕಗ್ಗತ್ತಲು ಎಲ್ಲೆಲ್ಲೂ



ಕವಿಯುವುದರಿಂದ, ನೆರಳುಗಳಲ್ಲಿ ಇದ್ದಕ್ಕಿದ್ದಂತೆ ವ್ಯತ್ಯಾಸವಾಗುತ್ತದೆ. ಕಪ್ಪು ಗೋಲದ ಸುತ್ತಲೂ ಕಿರೀಟ ಮತ್ತು ಉಬ್ಬಗಳು ಕಾಣುತ್ತವೆ. ಹಗಲಾದರೂ ಕೆಲವು ನಕ್ಷತ್ರಗಳು ಗೋಚರಿಸುತ್ತವೆ. ಪಕ್ಷಿಗಳು ಗೂಡುಗಳಿಗೆ ಹೋಗಿ ಸೇರಿಕೊಳ್ಳುತ್ತವೆ. ಎರಡೇ ನಿಮಿಷಗಳ ನಂತರ ಈ ಎಲ್ಲ ವ್ಯತ್ಯಾಸಗಳು ಪುನಃ ಉಂಟಾಗುತ್ತವೆ. ಚಂದ್ರ ಸ್ವಲ್ಪ ಚಲಿಸಿದ ಕೂಡಲೇ ಸೂರ್ಯ ಗೋಲದ ದೊಡ್ಡ ಬೆಳಕು ನುಗ್ಗಿ ಬರುತ್ತದೆ. ಇದನ್ನು ಕಪ್ಪು ಗಾಜಿನಿಂದ ನೋಡಿದರೆ ಕಾಣಬಹುದು. ಆಗ ಸೂರ್ಯ ಕಪ್ಪು ಗೋಳದ ತುದಿಯಲ್ಲಿ ಪ್ರಜ್ವಲಿಸುತ್ತಿರುವ ವಜ್ರದಂತೆ ಕಾಣಿಸುತ್ತಾನೆ. ಬೆಳಕಿನಲ್ಲಿ ಹೀಗೆ ಹಠತ್ತಾಗಿ ವ್ಯತ್ಯಾಸವಾಗುವುದರಿಂದ ಗ್ರಹಣವನ್ನು ಬರಿಗಣ್ಣಿನಲ್ಲಿ ನೋಡಬಾರದು. ಪೂರ್ತಿ ಕತ್ತಲೆಯಲ್ಲಿ ಕಣ್ಣು ಬೊಂಬೆ (PuPil of the eye) ಪೂರ್ತಿ ತೆರೆದುಕೊಳ್ಳುತ್ತದೆ. ಆಗಲೇ ಗ್ರಹಣ ಮುಗಿದು ಸಹಸ್ರಪಾಲು ಹೆಚ್ಚು ಬೆಳಕು ನುಗ್ಗುತ್ತದೆ. ಈ ಹೆಚ್ಚಿನ ಬೆಳಕಿಗೆ ಅನುಗುಣವಾಗಿ ಕಣ್ಣುಬೊಂಬೆ ಚಿಕ್ಕದಾಗುವುದರೊಳಗೇ ಹೆಚ್ಚು ಬೆಳಕು ಒಳನುಗ್ಗಿ ಕಣ್ಣಿನ ಪಟಲವನ್ನು ಹಾನಿಪಡಿಸುತ್ತದೆ. ಇದರಿಂದ ಕಣ್ಣು ಪೂರ್ತಿ ಕುರುಡಾಗಬಹುದು.

**ವಿಶಿಷ್ಟ ಸಂಶೋಧನೆಗಳು**

ಅನೇಕ ವಿಶಿಷ್ಟ ಅಧ್ಯಯನಗಳು ಮತ್ತು ಸಂಶೋಧನೆಗಳನ್ನು ಪೂರ್ಣಗ್ರಹಣದಂದು ಮಾತ್ರ ನಡೆಸಲು ಸಾಧ್ಯ. ಪೂರ್ಣಗ್ರಹಣವಿಲ್ಲದಾಗ ನಡೆಸಲಶಕ್ಯ. ಸೂರ್ಯಕಿರೀಟ (Corona) ಮತ್ತು ಪ್ರಭಾವಲಯದ (Chromosphere) ಬಗ್ಗೆ ಮಾಹಿತಿಗಳನ್ನು ಪಡೆಯುವುದು ಪೂರ್ಣಗ್ರಹಣದಂದು ಮಾತ್ರ ಶಕ್ಯ. ಹಗಲಿನ ಬೆಳಕು ಆಗ ವಿಪರೀತ ಕಡಿಮೆ ಆಗಿಬಿಡುವುದರಿಂದ ಸೂರ್ಯಮಂಡಲಕ್ಕಿಂತ ಕಡಿಮೆ ಬೆಳಕಿನಲ್ಲಿ ಇವು ಕಾಣಿಸುತ್ತವೆ. ಸೂರ್ಯನ ಬೆಳಕಿನಿಂದಲೇ ಉದ್ಭವಿಸುವ ಅಯೋಣುಗಳಲ್ಲಿ, ಗ್ರಹಣದ ಸಮಯದಲ್ಲಿ ಬೆಳಕು ಏಕಾಏಕಿ ಕ್ಷಯಿಸುವುದರಿಂದ, ಅವುಗಳ ಪ್ರಮಾಣವೂ ಕ್ಷಯಿಸುತ್ತದೆ. ಇದರಿಂದ ವಾತಾವರಣದ ಬೇರೆಬೇರೆ ಸ್ತರಗಳಲ್ಲಿ ಬೇರೆ ಬೇರೆ ಪ್ರಭಾವ ಗೋಚರಿಸುತ್ತದೆ, ನಿರ್ಮಲ ಆಕಾಶದಲ್ಲಿ ನಕ್ಷತ್ರಗಳು ಹಗಲಿನಲ್ಲೂ ಕಾಣಿಸುತ್ತವೆ. ಸೂರ್ಯನ ಸಮೀಪದಲ್ಲಿದ್ದು ಬೇರೆ ಸಮಯಗಳಲ್ಲಿ ಕಾಣಿಸದ ಧೂಮಕೇತುಗಳು ಮುಂತಾದುವನ್ನು ಪತ್ತೆ ಹಚ್ಚಲು ಪೂರ್ಣ ಗ್ರಹಣದಂದೇ ಶಕ್ಯ. ಐನ್‌ಸ್ಟೈನರ ಸಾಪೇಕ್ಷವಾದದ ಬಗ್ಗೆ ಕೆಲವು ಪ್ರಯೋಗಗಳನ್ನು ಮಾಡುವುದು ಪೂರ್ಣಗ್ರಹಣದಂದು ಮಾತ್ರಸಾಧ್ಯ. ಪ್ರಾಣಿಗಳು ಸಸ್ಯಗಳು ಗ್ರಹಣದ ಅವಧಿಯಲ್ಲಿ ವಿಚಿತ್ರವಾಗಿ ವರ್ತಿಸುವುದರಿಂದ ಇವುಗಳ ಬಗ್ಗೆ ಜೀವ ವಿಜ್ಞಾನಿಗಳು ಪೂರ್ಣ ಗ್ರಹಣದಂದು ಪ್ರಯೋಗ ನಡೆಸುತ್ತಾರೆ.

ಮುಂಬರುವ ಫೆಬ್ರುವರಿ 16 ರ ಪೂರ್ಣಗ್ರಹಣದ ಬಗ್ಗೆ ನಾನಾ ಯೋಜನೆಗಳಿವೆ. ಭಾರತೀಯ ಖಗೋಳ–ಭೌತ ವಿಜ್ಞಾನಿಗಳ ಸಂಸ್ಥೆಯು ಕಿರೀಟ ಮತ್ತು ಪ್ರಭಾವ ವಲಯಗಳ ಅನ್ವೇಷಣೆಗೆ ಯೆಲ್ಲಾಪುರದಲ್ಲಿ ವ್ಯವಸ್ಥೆ ಮಾಡಿದೆ. ದೆಹಲಿಯ ನ್ಯಾಷನಲ್ ಫಿಸಿಕಲ್ ಪ್ರಯೋಗ ಶಾಲೆ ಅಹಮದಾಬಾದ್‌ನ ಫಿಸಿಕಲ್ ರಿಸರ್ಚ್ ಲ್ಯಾಬೊರೇಟರಿ, ನೈನಿಕಾಲಿನ ವೀಕ್ಷಣಾಲಯ ಹೈದರಾಬಾದಿನ ಉಸ್ಮಾನಿಯ ವಿಶ್ವವಿದ್ಯಾಲಯ ಬೊಂಬಾಯಿಯ ಟಾಟಾ ಇನ್‌ಸ್ಟಿಟ್ಯೂಟ್ ಆಫ್ ಫಂಡಮೆಂಟಲ್ ರಿಸರ್ಚ್ ಮುಂತಾದ ಸಂಸ್ಥೆಗಳು ಯೋಜನೆಗಳನ್ನು ಸ್ಥಾಪಿಸಿವೆ.

ಗ್ರಹಣ ಹಿಡಿದಾಗ ಈ ಪ್ರಯೋಗಗಳಿಗೆ ದೊರಕುವ ಅವಧಿ ಬಹು ಸ್ವಲ್ಪ ಮೂರು ನಾಲ್ಕು ನಿಮಿಷಗಳು ಮಾತ್ರ ಆದ್ದರಿಂದ ಒಂದು ಕ್ಷಣವನ್ನೂ ವ್ಯರ್ಥ ಮಾಡದೆ ತಕ್ಷಣ ಉಪಯೋಗಿಸುವುದು ಬಹು ಮುಖ್ಯ ಪ್ರಯೋಗದಲ್ಲಿ ಅಥವಾ ವೀಕ್ಷಣೆಯಲ್ಲಿ ಸ್ವಲ್ಪ ತಪ್ಪಾದರೂ ಅದನ್ನು ತಿದ್ದಲು, ಸರಿಪಡಿಸಲು ವೇಳೆಯೇ ಇರುವುದಿಲ್ಲ. ಆದ್ದರಿಂದ ಪುನಃ ಪ್ರಯೋಗ ನಡೆಸುವ ಸಾಧ್ಯತೆಯೇ ಇಲ್ಲ. ಪರ್ವತಗಳು, ಅರಣ್ಯ, ಮರುಭೂಮಿ ಮುಂತಾದವುಗಳ ಮೂಲಕ ಗ್ರಹಣ ಹಾದು ಹೋಗುವುದಿದ್ದರೆ ವಿಜ್ಞಾನಿಗಳು ಕೆಲವು ತಿಂಗಳುಗಳ ಮುಂಚೆಯೇ ತಮ್ಮ ಸಾಮಾನು ಉಪಕರಣಗಳನ್ನು ಅಲ್ಲಿಗೆ ಒಯ್ದು ಬಿಡಾರಗಳನ್ನು ನಿರ್ಮಿಸಿ ಸಂಪೂರ್ಣ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಾರೆ. ಗ್ರಹಣದ ಮುಂಚೆ ಅನೇಕ ಸಾರಿ ತಮ್ಮ ಪ್ರಯೋಗವನ್ನು ನಡೆಸಿ ಗ್ರಹಣ ಹಿಡಿದಾಗ ಒಂದು ಸೆಕೆಂಡೂ ವ್ಯರ್ಥವಾಗದಂತೆ ಅಭ್ಯಾಸ ಮಾಡಿಕೊಳ್ಳುತ್ತಾರೆ. —

# ಶ್ರೀ ಸಿದ್ಧಗಂಗಾ ಕ್ಷೇತ್ರ: ಪರಿಸರ ಮತ್ತು ಇತಿಹಾಸ

(ಶ್ರೀ ಕ್ಷೇತ್ರದ ಪರಿಸರದ ಮಹತ್ವ ಮತ್ತು ಪ್ರಸಿದ್ಧ ಸ್ಥಾನಗಳು.)

—ಚನ್ನಪ್ಪ ಎರೇಸೀಮೆ

ಸಿದ್ಧಗಂಗಾ ಕ್ಷೇತ್ರವು ಭಾರತದಲ್ಲಿ ಇಂದು ಜ್ಞಾನ ವಿಜ್ಞಾನಗಳ ಒಂದು ಗಣನೀಯ ಸ್ಥಾನವೆಂದೂ ಧಾರ್ಮಿಕ ಹಾಗೂ ಸಾಂಸ್ಕೃತಿಕ ಮೌಲ್ಯಗಳ ಪವಿತ್ರ ಸ್ಥಳವೆಂದೂ, ಎಲ್ಲಕ್ಕೂ ಮಿಗಿಲಾಗಿ ವೀರಶೈವ ಪರಂಪರೆಯ ಮಹಾ ದಾಸೋಹ ಕ್ಷೇತ್ರವೆಂದೂ, ಸಮಸ್ತ ಮಾನವ ಸಂಸ್ಕೃತಿಯನ್ನು ಗೌರವಿಸುವ ಸ್ಥಾನವೆಂದೂ, ಪ್ರಖ್ಯಾತವಾಗಿ ದೇಶ ವಿದೇಶಗಳ ವಿಚಾರವಾದಿಗಳ ಗಮನ ಸೆಳೆದಿದೆ. ಈ ಕ್ಷೇತ್ರ ಸಮಸ್ತ ಜನಾಂಗದ ಅನುಕೂಲಕ್ಕಾಗಿ ಅನೇಕ ಮುಖದಲ್ಲಿ ರಚನಾತ್ಮಕ ಕಾರ್ಯಗೌರವದಲ್ಲಿ ತೊಡಗಿ ನವಭಾರತ ನಿರ್ಮಾಣ ಕಾರ್ಯದಲ್ಲಿ ಶಕ್ತಿಮೀರಿ ಶ್ರಮಿಸಿದೆ; ಶ್ರಮಿಸುತ್ತಿದೆ. ಈ ಕ್ಷೇತ್ರಾಧಿಪತಿಗಳು ಸಾರ್ವಜನಿಕರಿಗೆ ತಾವು ಇಷ್ಟು ಮಾಡಿದ್ದೇವೆಂದು ಹೇಳಿಕೊಳ್ಳುತ್ತಿಲ್ಲ. ಜಂಗಮ ಸ್ಥಾನವನ್ನಲಂಕರಿಸಿ ಸರ್ವಲೋಕೋಪಕಾರಕ್ಕಾಗಿ ತಾವು ತಮ್ಮ ಪಾಲಿನ ಯಾವ ಕಾರ್ಯ ಮಾಡಬೇಕು ಎಂಬುದನ್ನು ಸ್ವತಃ ಮಾಡಿ ಆಚರಿಸಿ ತೋರಿಸಿ ಲೋಕ ಜೀವನಕ್ಕೆ ಪೂರಕವಾಗಿದ್ದಾರೆ. ದಾಸೋಹಂಭಾವದಲ್ಲಿ ತಮ್ಮನ್ನು ಪೂರ್ಣ ಸವೆಸಿ ಎಣ್ಣೆ ಬತ್ತಿಗಳು ತಾವು ಸವೆದು ಲೋಕವನ್ನು ಬೆಳಕು ಮಾಡುವಂತೆ ವ್ಯವಹರಿಸಿದ್ದಾರೆ; ಲೋಕವನ್ನು ಆದಷ್ಟು ದಷ್ಟ ಪುಷ್ಟಗೊಳಿಸಿದ್ದಾರೆ. ಜಂಗಮ ಧರ್ಮ ಬಹು ಸತ್ವದಿಂದ ಕೂಡಿದುದೆಂದೂ, ಅದು ಕ್ರಿಯಾಮುಖವಾಗಿ ಹೊರಹೊಮ್ಮಿದಾಗ ಅಘಟಿತ ಘಟನೆ ನಡೆದು ಹೋಗುವುದೆಂದೂ, ಈ ಕ್ಷೇತ್ರ ಮತ್ತು ಕ್ಷೇತ್ರಾಧಿಪತಿಗಳು ತೋರಿಸಿಕೊಟ್ಟಿದ್ದಾರೆ. ಬಸವಾದಿ ಪ್ರಮಥರು ನುಡಿದು ಆಚರಿಸಿ ತೋರಿಸಿದ 'ಸಕಲ ಜೀವಾತ್ಮರಿಗೆ ಲೇಸನ್ನು ಬಯಸುವ' ಬಯಕೆಯನ್ನು ತಲೆಯ ಮೇಲೆ ಹೊತ್ತು ಶ್ರಮಿಸುವುದೇ ಈ ಕ್ಷೇತ್ರಾಧಿಪತಿಗಳು ನಡೆದು ಬಂದ ದಾರಿ. ಇಂಥ ಆದರ್ಶ ಕ್ರಿಯಾ ಸಂಪತ್ತಿನ ಫಲವಾಗಿ 'ಸರ್ವೇಜನಾಃ ಸುಖಿನೋಭವಂತು' ಎಂಬ ಪ್ರಾಚೀನ ಭಾರತೀಯ ಧರ್ಮದ್ರಷ್ಟಾರರ ಉಕ್ತಿ, ಈ ಕ್ಷೇತ್ರದಲ್ಲಿ ಕಾರ್ಯರೂಪಕ್ಕೆ ಬಂದಿದೆ. ಈ ಕ್ಷೇತ್ರದಲ್ಲಿ ಅನಾದಿಕಾಲದಿಂದಲೂ ನಡೆದು ಬಂದ ದಾಸೋಹ ಕ್ರಿಯೆ (ಪ್ರಸಾದ ವಿತರಣಾ ಕ್ರಿಯೆ) ಬರಬಹುದಾದ ಅನೇಕ ಅಗ್ನಿಪರೀಕ್ಷೆಗಳನ್ನೆಲ್ಲ ಗೆದ್ದು ನೂರಾರು ವರ್ಷಗಳಿಂದ ಅವಿಚ್ಛಿನ್ನವಾಗಿ ನಡೆದು ಬಂದಿದೆ. ಹೇಗೆ ನಡೆದು ಬಂದಿದೆ? ಈಗ ಹೇಗೆ ನಡೆಯುತ್ತಿದೆ? ಎಂಬುದೊಂದು ಬಿಡಿಸಲಾರದ ಕಗ್ಗಂಟು, ನೋಡುವವರಿಗೆ. ಆದರೆ ಇಲ್ಲಿನ ಶಿವಯೋಗಿಗಳ ಸತ್ತ್ವಭರಿತವಾದ ವೀರವಿರಕ್ತ ಧರ್ಮದ ಒಂದು ಸಹಜಕ್ರಿಯೆಯಾಗಿಯೇ ಇದು ಇಂದಿಗೂ ನಡೆಯುತ್ತ ಬಂದಿದೆ. 1930 ನೆಯ ಇಸ್ವಿಯಲ್ಲಿ ಶ್ರೀಮದುದ್ದಾನನ ಶಿವಯೋಗಿಗಳವರ ಕರಕಂಜಸಂಜಾತರಾಗಿ ಶ್ರೀ ಶಿವಕುಮಾರ ಮಹಾ ಸ್ವಾಮಿಗಳು ಕ್ಷೇತ್ರಾಧ್ಯಕ್ಷರಾದಮೇಲಂತೂ ಅಘಟಿತ ಘಟನಾ ಸಮರ್ಥರಾದ ಗುರುಗಳು ಕೃಪಾಶೀರ್ವಾದದ ವಜ್ರಕವಚ ತೊಟ್ಟು ಅವರ ಪಂಚಪರುಷ ಶಕ್ತಿಗಳನ್ನು ಕೈವಶಪಡಿಸಿಕೊಂಡು ಶ್ರೀ ಕ್ಷೇತ್ರದ ದಾಸೋಹ ಕ್ರಿಯೆಯನ್ನು 'ನಭೂತೋ ನಭವಿಷ್ಯತಿ' ಎನ್ನುವಂತೆ ಮಾಡಿದ್ದಾರೆ. ತತ್ಫಲವಾಗಿ ಮಠದ ಕೀರ್ತಿ ಗೌರವಗಳು ದಿಗಂತ ವಿಶ್ರಾಂತ ಗೊಂಡಿವೆ.

ಇವರು ಮಠದ ಅಭಿವೃದ್ಧಿಗೊಳಿಸಿದ್ದಾರೆಂದರೂ ಒಂದೇ; ಸರ್ವ ಜನಾಂಗದ ಅತಿಥ್ಯದ ಇನ್ನೊಂದು ಹೆಸರೇ ಶ್ರೀ ಸಿದ್ಧಗಂಗಾಕ್ಷೇತ್ರ. ಶ್ರೀ ಶಿವಕುಮಾರ ಸ್ವಾಮಿಗಳವರು ದಿನದಲಿತೋದ್ಧಾರಕ್ಕೆ ಶ್ರಮಿಸಿದ್ಧಾರೆ. ಜೀವನದ ಅನೇಕ ಕಷ್ಟದಲ್ಲಿ ನೊಂದು ಬೆಂದು ಆಶಾಜ್ಯೋತಿಯನ್ನೇ ನಂದಿಸಿಕೊಂಡವರನ್ನು ಸಂತೈಸಿ ಅವರಲ್ಲಿ ನೂತನ ಆಶೆಯಜ್ಯೋತಿಯನ್ನು ಬೆಳಗಿಸಿದ್ದಾರೆ. ಲಕ್ಷಾಂತರ ಬಡಮಕ್ಕಳ ಪೋಷಣೆಯ ಭಾರಹೊತ್ತು ಪೋಷಿಸಿ ವಿದ್ಯಾಬುದ್ಧಿ ಕಲಿಸಿ ಜೀವನದಲ್ಲಿ ತಲೆಯೆತ್ತಿ ಬಾಳುವ ಮಾರ್ಗತೋರಿಸಿದ್ದಾರೆ. ಅನಾಥರಿಗೆ ಅನ್ನವಿಕ್ಕಿ ಸಂತುಷ್ಟಗೊಳಿಸಿದ್ದಾರೆ. ಅನೇಕ ವಿದ್ಯಾವಂತರ ಪೋಷಕರಾಗಿ ಅವರಿಗೆ ಜೀವನದ ಮಾರ್ಗಗಳನ್ನು ಕಲ್ಪಿಸಿಕೊಟ್ಟಿದ್ದಾರೆ ನೂರಾರು ಮಠಮಾನ್ಯಗಳ ಪಟ್ಟಗಳಿಗೆ ಧರ್ಮನೀತಿಸಂಹಿತೆಯ ಮತ್ತು ಕ್ರಿಯಾಚಾರದ ಆಚಾರ್ಯ ಪುರುಷರಾಗಿದ್ದಾರೆ. ತಮ್ಮ ಸತ್ತ್ವಭರಿತ ಉಪದೇಶಗಳಿಂದ ಲೋಕದ ಅಸಂಖ್ಯಾತ ಜನಗಳಿಗೆ ಮಾರ್ಗದರ್ಶನ ಮಾಡಿದ್ದಾರೆ. ಪ್ರವಚನ ಪಟುಗಳಾಗಿ ಪುರಾಣ ಪ್ರವಚನ ಮಾಡಿದ್ದಾರೆ. ಉಪಾಧ್ಯಾಯರುಗಳಿಗೆ ವಿದ್ಯಾರ್ಥಿಗಳಿಗೆ ಪಾಠಪ್ರವಚನ ಮಾಡಿದ್ದಾರೆ. ಕೃಷಿ ಕಾಯಕಮಾಡಿ ದುಡಿದು ಸಂಪಾದಿಸಿ ತೋರಿಸಿ ಲೋಕಕ್ಕೆ ಏನೇನು ಮಾರ್ಗದರ್ಶನ ಮಾಡಬೇಕೋ ಅದೆಲ್ಲವನ್ನೂ ಶ್ರದ್ಧಾ ಭಕ್ತಿ ವಿಶ್ವಾಸದಿಂದ ಮಾಡಿ ಮುಗಿಸಿದ್ದಾರೆ. ಒಟ್ಟಿನಲ್ಲಿ ಸತ್ತ್ವಭೂಯಿಷ್ಠವಾದ ಶ್ರೀ ಸಿದ್ಧಗಂಗಾ ಪುಣ್ಯಕ್ಷೇತ್ರ ಮಧ್ಯದಲ್ಲಿ ಬೆಳೆದು ಲೋಕದುದ್ದಕ್ಕೂ ರೆಂಬೆ ಕೊಂಬೆಗಳನ್ನು ಚಾಚಿ ನಿಂತ ಮಹಾವೃಕ್ಷವಾಗಿದ್ದಾರೆ. ಆ ಮಹಾವಿಟಪಿಯ ಆಶ್ರಯ ಛಾಯೆಯಲ್ಲಿ ಲಕ್ಷೋಪಲಕ್ಷ ಜನ ವಿಶ್ರಮಿಸಿದ್ದಾರೆ. ಹಸಿವೆಯಾದರೆ ಫಲಗಳನ್ನು ಕಿತ್ತು ತಿಂದಿದ್ದಾರೆ. ಆಲಂಕರವಾಗಿ ಈ ಕ್ಷೇತ್ರಾಧಿಪತಿ ಶ್ರೀ ಶಿವಕುಮಾರಸ್ವಾಮಿಗಳವರ ವಿಚಾರವಾಗಿ ಹೇಳಬಹುದು.

### ಶ್ರೀ ಸಿದ್ಧಗಂಗಾಕ್ಷೇತ್ರದ ಪರಿಸರ ಮಹತ್ವ

ಶ್ರೀ ಸಿದ್ಧಗಂಗಾಕ್ಷೇತ್ರ ತುಮಕೂರು ಜಿಲ್ಲೆಯಲ್ಲಿದೆ. ತುಮಕೂರಿನಿಂದ ಪೂರ್ವಕ್ಕೆ ಮೂರು ಮೈಲುಗಳ ಅಂತರದಲ್ಲಿದೆ. ದಾಸೋಹಮೂರ್ತಿಯಾದ ಚಿಕ್ಕಣ್ಣ ಸೆಟ್ಟಿಯೆಂಬ ಶರಣನಿದ್ದ ಕೇತಸಮುದ್ರ (ಕ್ಯಾತಸಂದ್ರ) ದಿಂದ ಉತ್ತರಕ್ಕೆ ಎರಡು ಫರ್ಲಾಂಗ್ ದೂರದಲ್ಲಿದೆ.[1] ಅನೇಕ ಶಿವಶರಣರ ಬೀಡಾಗಿದ್ದು ಚೋಳರ ಕಾಲದಿಂದಲೂ ಪ್ರಸಿದ್ಧವಾಗಿರುವ ದೇವರಾಯ ಪಟ್ಟಣದಿಂದ ಆಗ್ನೇಯಕ್ಕೆ ಅರ್ಧ ಮೈಲು ದೂರದಲ್ಲಿದೆ.[2] ಅನೇಕ ಗುಹೆಗಳಿಂದಲೂ ಶಿವಲಿಂಗಗಳಿಂದಲೂ ತುಂಬಿರುವ ರಾಮಗಿರಿ ಎಂಬ ಹೆಸರಿನ ಬೆಟ್ಟವೂ (ರಾಮಲಿಂಗನ ಬೆಟ್ಟ ಅಥವಾ ರಾಮದೇವರ ಬೆಟ್ಟ) ಸಿದ್ಧಗಂಗಾ ಬೆಟ್ಟ (ಶಿವಗಿರಿ ?)ವೂ ಅವಳಿ ಬೆಟ್ಟಗಳಾಗಿವೆ. ಈ ಬೆಟ್ಟ ಸಿದ್ಧಲಿಂಗೇಶ್ವರ ಕ್ಷೇತ್ರದಿಂದ ಪೂರ್ವದಿಗ್ಭಾಗದಲ್ಲಿ ಆನತಿ ದೂರದಲ್ಲಿಯೇ ಇದೆ. ಸಿದ್ಧಗಂಗಾಗಿರಿ (ಶಿವಗಿರಿ ?) ರಾಮಲಿಂಗೇಶ್ವರ ಬೆಟ್ಟಗಳಿಂದ ಆಗ್ನೇಯಕ್ಕೆ ನಾಲ್ಕು ಮೈಲುಗಳ ಅಂತರದಲ್ಲಿ ಸಿದ್ಧಗಿರಿ ಇದೆ. ಈ ಸಿದ್ಧಗಿರಿಗೆ ಸಿದ್ಧನಬೆಟ್ಟ ಅಥವಾ ನಿಜಗಲ್ಲು ಬೆಟ್ಟವೆಂದೂ ಕರೆಯಲಾಗುತ್ತಿದೆ. ಇದು ಅನೇಕ ಗುಹೆಗಳಿಂದಲೂ, ಆ ಗುಹೆಗಳಲ್ಲಿ ಶಿವಲಿಂಗಗಳಿಂದಲೂ ಒಳಗೊಂಡು ಪ್ರಾಚೀನ ಶೈವೇತಿಹಾಸವನ್ನು ಸಾರುವ ಒಂದು ಸಂಶೋಧನಾಯೋಗ್ಯ ಸ್ಥಾನವಾಗಿದೆ. ಇಲ್ಲಿರುವ ಭವ್ಯವಾದ ಉದ್ಧಾನವೀರಭದ್ರನಿಂದ ಇದು ವೀರಭದ್ರಕ್ಷೇತ್ರವೂ ವೀರಶೈವಕ್ರಾಂತಿ ಕ್ಷೇತ್ರಗಳಲ್ಲಿ ಒಂದೂ ಎನಿಸಿದೆ. ಈ ಬೆಟ್ಟದಿಂದ ಆಗ್ನೇಯಕ್ಕೆ 4 ಮೈಲು ದೂರದಲ್ಲಿಯೇ ದಕ್ಷಿಣಕಾಶಿಯೆಂದೂ ಪುಣ್ಯಕ್ಷೇತ್ರವೆಂದೂ ಹೆಸರಾಗಿರುವ ಶಿವಗಂಗಾ ಬೆಟ್ಟವಿದೆ. ಶಿವಗಂಗೆಯಿದ ವಾಯುವ್ಯಕ್ಕೆ ಒಂದು ಗೆರೆ ಎಳೆದರೆ ನೇರವಾಗಿ ನಾಲ್ಕು ನಾಲ್ಕು ಮೈಲುಗಳ ಅಂತರದಲ್ಲಿ ಸಿದ್ಧಗಿರಿ–ರಾಮಗಿರಿ–ಸಿದ್ಧಗಂಗಾಗಿರಿ ಈ ನಾಲ್ಕು ಬೆಟ್ಟಗಳು ಪ್ರಾಚೀನ ಶೈವೇತಿಹಾಸದ ಅನಂತ ಅವಶೇಷಗಳಿಂದ ಕೂಡಿ ಬೀಗಿ ಬಳುಕಿನಿಂತಿವೆ. ಈ ನಾಲ್ಕು ಬೆಟ್ಟಗಳಲ್ಲಿ ಅನೇಕ ಗುಹೆಗಳು, ಶಿವಲಿಂಗಳು, ಕೋಟೆ ಕೊತ್ತಳಗಳು, ತಪೋಯೋಗ್ಯ ಸ್ಥಾನಗಳು ತುಂಬಿದ್ದು ಇವುಗಳು ಈ ನಾಡಿನ ಪ್ರಾಚೀನ ಇತಿಹಾಸದ ಮೇಲೆ ಬೆಳಕನ್ನು ಚೆಲ್ಲಬಲ್ಲವುಗಳಾಗಿವೆ. ಕಲ್ಯಾಣದ ಕ್ರಾಂತಿಯ ನಂತರ ಅನೇಕ ಚರಪತಿಗಳಿಂದ ಕೂಡಿ ಚಿಕ್ಕಸಿದ್ಧೇಶ್ವರನೆಂಬುವನು ಶಿವಗಂಗೆಗೆ ಬಂದು ಅಲ್ಲಿ

1. ಚೆನ್ನಬಸವಪುರಾಣ ಕಾಂ. 5, ಸಂ. 10 ಪ. 65
2. ಶಿವತತ್ತ್ವ ಚಿಂತಾಮಣಿ ಪು 401 ದ್ಯ 75; ಈ ಊರಿನಲ್ಲಿ ಚೋಳರ ಕಾಲದ ಒಂದು ಶಿವಾಲಯವೂ ಒಂದು ಪ್ರಾಚೀನ ವೀರಶೈವ ಮಠವೂ ಇದ್ದು ಇದು ಚಿಕ್ಕ ಪಾಳೆಯಪಟ್ಟಾಗಿತ್ತೆಂದು ತಿಳಿದುಬರುವುದು.

ಹೊನ್ನಾದೇವಿಯಿಂದ ಕಂಕಣ ಪಡೆದನೆಂದು ಹೇಳುವ ಹಂಪೆಯ ವಿರೂಪಾಕ್ಷ ಪಂಡಿತನ (ಕ್ರಿ. ಶ. 1585) ಚೆನ್ನಬಸವ ಪುರಾಣದ'....ಚಿಕ್ಕಸಿದ್ಧೇಶ್ವರಂ ಚರಪತಿಗಳು ಕೂಡಿಕೊಂಡಿರದೆ ಸಂಚರಿಸುತ್ತ ಶಿವಗಂಗೆಗೈತಂದು ಹೊನ್ನಾದೇವಿಯಿಂ ಕಂಕಣವ ಪಡೆದನು"* (62-43). ಈ ಮಾತು ವಿಚಾರಯೋಗ್ಯ. ಕಲ್ಯಾಣದ ಶಿವಶರಣರರನೇಕ ಸಂತಾನ ಶಿವಗಂಗೆಯ ಸುತ್ತಮುತ್ತ ಹರಡಲು ಇದು ಮುಖ್ಯ ಕಾರಣವಾಯಿತು. ಈ ಚಿಕ್ಕಸಿದ್ಧೇಶ್ವರನ ಗವಿ ಸಿದ್ಧಗಂಗಾ ಬೆಟ್ಟದ ಪಕ್ಕದ ರಾಮಲಿಂಗನ ಬೆಟ್ಟದಲ್ಲಿ ಈಗಲೂ ಇದೆ. ಇವನ ಕಾರಣದಿಂದಲೇ ಈ ಗವಿಗೆ ಚಿಕ್ಕಸಿದ್ದೇಶ್ವರನ ಗವಿಯೆಂದು ಹೆಸರು ಬಂದಿರಬಹುದು. ಈ ಗವಿಗೂ ಶಿವಗಂಗಾ ಕ್ಷೇತ್ರಕ್ಕೂ ನೇರವಾಗಿ ಸುಮಾರು ಏಳು ಮೈಲುಗಳ ದೂರವಾಗಿರಬಹುದು. ಸಾಕಷ್ಟು ವಿಶಾಲವಾದ ಈ ಗವಿಯಲ್ಲಿ ಶಿವಲಿಂಗವಿದೆ. ಭವ್ಯವಾದ ಈ ಗವಿ ರಾಮಗಿರಿಯ ಮಧ್ಯದ ಸುಂದರ ಸನ್ನಿವೇಶದಲ್ಲಿದೆ, ಹೊರಭಾಗದಲ್ಲಿನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ಗವಿಯ ಹೊರಭಾಗದಲ್ಲಿರುವ ಬಂಡೆಗಳ ಮೇಲಿನ ಕೆಲವು ಚಿಹ್ನೆಗಳು ಏನೆಂಬುದು ತಿಳಿಯುತ್ತಿಲ್ಲ. ಈ ಗವಿಯ ಪಶ್ಚಿಮದಿಗ್ಭಾಗದಲ್ಲಿ ಸಮೀಪದಲ್ಲಿಯೇ ಅತ್ಯಂತ ಮಹತ್ವದ ದೊಡ್ಡಸಿದ್ದಪ್ಪನ ಗವಿಯಿದೆ. ಈ ಗವಿಗೆ ಈ ಹೆಸರು ಬರಲು ಕಾರಣ: ತೋಂಟದ ಸಿದ್ಧಲಿಂಗೇಶ್ವರರ ಪ್ರಮುಖ ಶಿಷ್ಯರಲ್ಲೊಬ್ಬರಾಗಿದ್ದ ದೊಡ್ಡಸಿದ್ಧಪ್ಪನವರ ಸಂಬಂಧದಿಂದ ಇತ್ತೀಚೆಗೆ ಬಂದಿರಬಹುದು. ಈ ಗವಿಯು ಮೂರು ಬಾಗಿಲುಗಳಿಂದ ಕೂಡಿದ್ದು ಈ ಮೂರು ಬಾಗಿಲುಗಳೂ ಕಡೆದು ಸುಂದರಗೊಳಿಸಲ್ಪಟ್ಟಿವೆ. ಇದು ಬಹು ದುರ್ಗಮವಾಗಿದ್ದು, ಒಳಗೆ ಶಿವಲಿಂಗ ಮತ್ತು ನಂದಿಗಳಿವೆ. ಹಿಂದಿನ ಸಿದ್ಧಗಂಗಾಧಿಪತಿಗಳಿಗೂ ಈ ಗವಿಗೂ ನಿಕಟ ಸಂಬಂಧವಿದ್ದುದಾಗಿ ತಿಳಿದು ಬರುತ್ತದೆ.

ನಮ್ಮ ಪ್ರಾಚೀನ ಶಿವಯೋಗಿಗಳು, ಸಿದ್ಧಪುರುಷರು ನಿಸರ್ಗಸೊಬಗಿನ ಸೌಂದರ್ಯಕ್ಕೆ ಮಾರುಹೋದರು. ಪರಮಾತ್ಮನ ವ್ಯಕ್ತರೂಪವಾದ ಸೃಷ್ಟಿಯ ಅನಂತ ರೂಪರಾಶಿಯನ್ನು ಅವರು ಎಂದೂ ಕಡೆಗಣಿಸಿದವರಲ್ಲ. ಶಿವಲೀಲೆಯ ರಸಬುಗ್ಗೆಯಾಗಿರುವ ಸತ್ಯ–ಸುಂದರ ಶಿವದ ಜೀವಂತ ದೇಗುಲವಾಗಿ ಸೃಷ್ಟಿಯ ಶುದ್ಧ ಸೌಂದರ್ಯದಿಂದ ತಿರೋಧಾನರಾದವರಲ್ಲ. ಅಂತಯೇ ಶಿವನ ಅಗಾಧ ಲೀಲೆಯ ರಸಬುಗ್ಗೆಯಾಗಿರುವ ಸಹಜ ಸೌಂದರ್ಯ ತಾಣಗಳಾದ ಬೆಟ್ಟಗುಡ್ಡಗಳಲ್ಲಿ ಸೃಷ್ಟಿಯೇ ನಿರ್ಮಿಸಿದ ಹೆಬ್ಬಂಡೆಗಳ ತಳದ ಗೂಡುಗಳನ್ನು ತಮ್ಮ ತಪೋಭೂಮಿಗಳನ್ನಾಗಿ ಮಾಡಿಕೊಂಡು ಅಲ್ಲಿ ಆತ್ಮಾರಾಮರಾಗಿ ನಿತ್ಯಸತ್ಯವನ್ನು ಅರಸುತ್ತಿದ್ದರೆಂದು ತೋರುತ್ತದೆ. ಅವರು ಲೋಕಜೀವನದಿಂದ ದೂರವಿದ್ದು ಅದರ ಪಾರಿಶುದ್ಧಕ್ಕೆ ಹೆಣಗಿ ಲೋಕವನ್ನು ತಿದ್ದುತ್ತಿದ್ದರು. ಸದಾ ಸೃಷ್ಟಿಯ ಸೊಬಗಿನ ಮಧ್ಯದಲ್ಲಿ ತಾವೂ ಸೃಷ್ಟಿಯೇ ಅಗಿ ಕಂಗೊಳಿಸುತ್ತಿದ್ದರು. ಇಲ್ಲದಿದ್ದರೆ ಇಂಥ ದುರ್ಗಮ ಗವಿಗಳನ್ನು ಆರಿಸಿಕೊಂಡು ವಾಸಯೋಗ್ಯವಾದವುಗಳನ್ನಾಗಿ ಏಕೆ ಮಾಡಿಕೊಳ್ಳುತ್ತಿದ್ದರು? ಅಲ್ಲಿ ಇವರ ಕಣ್ಣಿಗೆ ಸದಾ ಕಾಣುವ ಸೂರ್ಯೋದಯ ಸೂರ್ಯಾಸ್ತಗಳ ಸೊಬಗು, ವಿಶಾಲವಾದ ಭೂಭಾಗ ತಲೆಯೆತ್ತಿ ನೋಡಿದರೆ ಕಾಣುವ ಸುಂದರ ಬೆಟ್ಟದ ಉತ್ತುಂಗ ಶೃಂಗಗಳು ಅದರ ಮೇಲೆ ಅನಂತವೆನಿಸಿ ಕಾಣುವ ನೀಲಾಕಾಶ, ಹಚ್ಚನೆಯ ಹಸಿರುದುಂಬಿ ಸದಾ ರಾರಾಜಿಸುತ್ತಿರುವ ಸುತ್ತಮುತ್ತಣ ಅರಣ್ಯರಾಶಿ ಭೀಮಾಕಾರದ ಅರೆ ಬಂಡೆಗಳ ಸೊಬಗು, ಸ್ವಚ್ಛಂಧವಾಗಿ ವಿಹರಿಸುವ ವನ್ಯಮೃಗಗಳು, ಪಶು ಪಕ್ಷಿಗಳು–ಈ ಸಹಜ ಸುಂದರ ನಿಸರ್ಗ ಸೊಬಗಿನ ಬಾಳು ಅವರನ್ನು ಮುಗ್ಧರನ್ನಾಗಿ ಮಾಡುತ್ತಿತ್ತು. ಆನಂದತುಂದಿಲರನ್ನಾಗಿ ಮಾಡುತ್ತಿತ್ತು. ಅಂತೆಯೇ ಸಾಮಾನ್ಯ ಮನುಷ್ಯವರ್ಗದಿಂದ ವಾಸಿಸಲಶಕ್ಯವಾದ ತಾಣಗಳನ್ನು ತಮ್ಮ ತಪೋಯೋಗಸ್ಥಾನಗಳನ್ನಾಗಿ ಆರಿಸಿಕೊಳ್ಳುತ್ತಿದ್ದರು. ನಿತ್ಯ ಸತ್ಯ ತತ್ವವನ್ನರಸುವ ಬೀಡುಗಳನ್ನಾಗಿ ಮಾಡಿಕೊಳ್ಳುತ್ತಿದ್ದರು. ಈ ದೃಷ್ಟಿಯಿಂದ ಶಿವಗಂಗಾಗಿರಿ-ಸಿದ್ಧರಬೆಟ್ಟ, ರಾಮಗಿರಿ, ಸಿದ್ಧಗಂಗಾಗಿರಿ – ಇಗವುಳು ಒಂದಕ್ಕೊಂದು ಸಂಬಂಧವುಳ್ಳವುಗಳಾಗಿ, ಅನೇಕ ಪ್ರಾಚೀನ ಸಿದ್ಧಪುರುಷರ ಸಿದ್ಧಿಕ್ಷೇತ್ರಗಳೂ ಕ್ರಾಂತಿಕ್ಷೇತ್ರಗಳು ಆಗಿದ್ದವು ಎಂಬುದನ್ನು ಇಲ್ಲಿನ ಅವಶೇಷಗಳಿಂದ ಅರಿಯಬಹುದಾಗಿದೆ.

ಇಲ್ಲಿನ ಗುಹೆಗಳು 12 ನೆಯ ಶತಮಾನದಿಂದಲೂ ಬೆಳೆದುಬಂದ ವೀರಶೈವ ಮಹಾಕ್ರಾಂತಿಯಲ್ಲಿ ಪ್ರತ್ಯಕ್ಷ ಭಾಗಿಗಳಾಗಿದ್ದ ಅನೇಕ ಶಿವಯೋಗಿಗಳ ನಿವಾಸಸ್ಥಾನಗಳಾಗಿದ್ದುವೆಂದೂ ಇತ್ತೀಚಿನ ಅನೇಕ ಸಿದ್ಧಪುರುಷರ ತಾಣಗಳಾಗಿದ್ದವೆಂದೂ ಇತ್ತೀಚಿನ ಅನೇಕ ಸಿದ್ಧಪುರುಷರ ತಾಣಗಳಾಗಿದ್ದವೆಂದೂ ತಿಳಿದು ಬರುವುದು. ಅದಕ್ಕೂ ಪೂರ್ವದಲ್ಲಿ ಇವು ಅನೇಕ ಪಾಶುಪತಾಚಾರ್ಯಗಳ ಬೀಡುಗಳೂ ಆಗಿರಬಹುದು. ಪಾಶುಪತಾಚಾರ್ಯರು ಸ್ಥಾಪಿಸಿದ ಲಿಂಗಗಳಿಗೆಲ್ಲಾ 'ಸಿದ್ದೇಶ್ವರ' ಎಂದು ಹೆಸರಿರುವುದೂ ಪ್ರಸಿದ್ಧವಾದ ಅಂಶ. ಅವು ವಾಸಯೋಗ್ಯಗವಿಗಳಾದ ಬಗೆಗೆ ಏನೇನೂ ಸುಳಿವು ಸಿಗುವುದಿಲ್ಲ; ಈಗಲೂ ಸುವ್ಯವಸ್ಥೆಯಲ್ಲ. ಸಿದ್ಧಗಂಗಾ ಬೆಟ್ಟದಲ್ಲಿ ಮೂರುಗವಿಗಳೂ, ರಾಮಲಿಂಗನ ಬೆಟ್ಟದ ನಾಲ್ಕು ಗವಿಗಳೂ, . ಸಿದ್ಧನಬೆಟ್ಟದಲ್ಲಿ ಮೂರು ಗವಿಗಳೂ ಶಿವಗಂಗಾಬೆಟ್ಟದಲ್ಲಿ ಐಳೆಂಟು ಗವಿಗಳೂ ನಮಗೆ ಕಾಣಿಸುತ್ತವೆ. ಅನೇಕ ಗವಿಗಳು ಹಾಳಾಗಿವೆ. ಈ ದೃಷ್ಟಿಯಿಂದ ಬೆಂಗಳೂರು ಜಿಲ್ಲೆಯಲ್ಲಿರುವ ರೇವಣ್ಣಸಿದ್ಧೇಶ್ವರನ ಬೆಟ್ಟ' ಕೊರಟಗೆರೆ ತಾಲ್ಲೂಕಿನಲ್ಲಿರುವ ಸಿದ್ಧನಬೆಟ್ಟಗಳೂ, ಕಲ್ಲೆಯಬೆಟ್ಟದ ಎರಡು ಗವಿಗಳೂ ವಿಚಾರಯೋಗ್ಯ ಸ್ಥಾನಗಳಾಗಿವೆ, ಈ ಪರಿಸರದ ವೀರಶೈವರಿಗೆಲ್ಲ ಈ ತಾಣಗಳ ಸಂಬಂಧ ಅನೇಕ ರೀತಿಯಲ್ಲಿ ಹೆಣೆದುಕೊಂಡಿದೆ.

**ಸಿದ್ಧಗಂಗಾ ಪರಿಸರದಲ್ಲಿನ ಅನೇಕ ಪ್ರಸಿದ್ಧ ಸ್ಥಾನಗಳು**

1) **ಬೆಳಗುಂಬ :** ಸಿದ್ಧಗಂಗಾ ಬೆಟ್ಟದ ಸಮೀಪದಲ್ಲಿ ಕೇವಲ ಒಂದು ಮೈಲು ಅಂತರದಲ್ಲಿರುವ ಬೆಳಗುಂಬ ಬೆಟ್ಟವು ಸಿದ್ಧರಾಮೇಶ್ವರರ ತಪೋಭೂಮಿಯಾಗಿದೆ. ಇಲ್ಲಿ ಸಿದ್ಧರಾಮೇಶ್ವರ ದೇವಾಲಯವಿದ್ದು, ಪ್ರತಿವರ್ಷ ಮಕರಸಂಕ್ರಮಣದಲ್ಲಿ ಜಾತ್ರೆ ನೆರವೇರುತ್ತದೆ. ಸಿದ್ಧರಾಮೇಶ್ವರರು, ರೇವಣಸಿದ್ಧ, ಮರುಳಸಿದ್ಧರ ಜೊತೆಯಲ್ಲಿ ಶಿವಗಂಗಾಪ್ರಾಂತದಲ್ಲಿ ಅನೇಕ ವರ್ಷಗಳು ಇದ್ದು ನಂತರ ಈ ಬೆಳಗುಂಬ ಬೆಟ್ಟದಲ್ಲಿ ಕೆಲವು ವರ್ಷ ಅನುಷ್ಠಾನ ಮಾಡಿ, ಗೋಡೆಕೆರೆ, ನೊಣವಿನಕೆರೆ, ಎಳನಡು, ಹುಲಿಯೂರುದುರ್ಗ, ಕಟ್ಟಿಗೆಹಳ್ಳಿ, ತಮಡಿಹಳ್ಳಿ ಮೊದಲಾದ ಕಡೆ ಹೋಗಿ ಆಮೇಲೆ ಸೊನ್ನಲಾಪುರಕ್ಕೆ ಬಂದು ಲಿಂಗೈಕ್ಯರಾಗಿರಬಹುದೆಂದು ಊಹಿಸಲು ಶಕ್ಯವಿದೆ. ಈಗ ದಕ್ಷಿಣ ಕರ್ನಾಟಕ ಪ್ರಾಂತದಲ್ಲಿ ಸುಮಾರು ಸ್ಥಾನಗಳು ಸಿದ್ಧರಾಮೇಶ್ವರ ಕ್ಷೇತ್ರಗಳಾಗಿವೆಯೆಂದು 'ಸದ್ಧರ್ಮ ದೀಪಿಕೆ' ಸಂಪಾದಕರಾದ ಶ್ರೀ ಚನ್ನಮಲ್ಲಿಕಾರ್ಜುನರು ಅಭಿಪ್ರಾಯಪಡುತ್ತಾರೆ. ಮರುಳಸಿದ್ಧ, ರೇವಣಸಿದ್ಧರ ಸ್ಮಾರಕವಿರುವ ಕಡೆಗಳಲ್ಲೆಲ್ಲ ಸಿದ್ಧರಾಮೇಶ್ವರರ ಸ್ಮಾರಕಗಳಿವೆಯೆಂದು ಶ್ರೀ ಚೆನ್ನಮಲ್ಲಿಕಾರ್ಜುನರು ತೋರಿಸಿಕೊಟ್ಟಿದ್ದಾರೆ[3]. ಬೆಳಗುಂಬದಲ್ಲಿದ್ದಾಗಲೇ 12ನೆಯ ಶತಮಾನದಲ್ಲಿ ಸಿದ್ಧಗಂಗಾಗಿರಿಯಲ್ಲೂ ಅವರು ಕೆಲವು ದಿನ ಇದ್ದಿರಬಹುದು ಎಂದು ಊಹಿಸಲು ಶಕ್ಯವಿದೆ. ಏಕೆಂದರೆ ಇವೆರಡೂ ಸ್ಥಾನಗಳು ತೀರ ಸಮೀಪದವು. ಹೊಂದಿಕೊಂಡೇ ಇರುವ ಬೆಟ್ಟಗಳು, ಶೂನ್ಯಸಿಂಹಾಸನಾಧೀಶರಾಗಿ ಸಿದ್ಧರಾಮೇಶ್ವರರೂ, ಆಚಾರ್ಯಪುರುಷರಾಗಿ ರೇವಣಸಿದ್ಧ, ರುದ್ರಮುನಿಯೂ ಮತ್ತು ಮರುಳಸಿದ್ಧೇಶ್ವರರೂ ಈ ಭಾಗದಲ್ಲಿ ತಮ್ಮಪಾಲಿನ ಕೆಲಸಮಾಡಿದ್ದಾರೆಂದು ಊಹಿಸಲು ಅನೇಕ ಆಧಾರಗಳನ್ನು ಶ್ರೀ ಚೆನ್ನಮಲ್ಲಿಕಾರ್ಜುನರು ಒದಗಿಸಿದ್ದಾರೆ[4]. ಇದಲ್ಲದೆ ಪಕ್ಕದ ರಾಮದೇವರ ಬೆಟ್ಟದ ಮೇಲಿರುವ ಕೋಟೆ ಕೊತ್ತಲುಗಳು ಅಲ್ಲಿರುವ ಶಿವಾಲಯ ಮತ್ತು ಗುಹೆ, ದೇವರಾಯನಪಟ್ಟಣದಲ್ಲಿನ ಅವಶೇಷಗಳೂ, ಕೇತಸಮುದ್ರದ ಅವಶೇಷಗಳೂ, ಈ ಭಾಗದ ಪ್ರಾಚೀನ ವೈಭವವನ್ನು ಬಿತ್ತರಿಸುವ ಕೆಲವು ಹಳೆಯ ಉಳಿಕೆಗಳು. ಚಾರಿತ್ರಿಕ ದೃಷ್ಟಿಯಿಂದಲೂ ಧರ್ಮ ಇತಿಹಾಸ ದೃಷ್ಟಿಯಿಂದಲೂ ಸಿದ್ಧಗಂಗೆಯ ಸುತ್ತಮುತ್ತಣ ಪ್ರದೇಶಗಳು ಅನೇಕ ಬಗೆಯ ಅವಶೇಷಗಳನ್ನು ಹೊಂದಿವೆ.

2) **ಗುಬ್ಬಿ :** ಅಮರಗುಂಡವೆಂದು 12 ನೇಯ ಶತಮಾನದಿಂದಲೂ ಪ್ರಸಿದ್ಧವಾದ ಗುಬ್ಬಿಯು ಶ್ರೀ ಸಿದ್ಧಗಂಗಾ ಕ್ಷೇತ್ರದಿಂದ ಕೇವಲ 11–12 ಮೈಲು ಪಶ್ಚಿಮದಿಗ್ಭಾಗದಲ್ಲಿದ್ದು, ಸಿದ್ಧಗಂಗೆಯೊಡನೆ ಪ್ರಾಚೀನ ಕಾಲದಿಂದಲೂ ಸಂಬಂಧವಿಟ್ಟುಕೊಂಡಿದ್ದ ಐತಿಹಾಸಿಕ ನಗರವಾಗಿದೆ. ಸಿದ್ಧಗಂಗೆಯಲ್ಲಿ ತಮಗೊಂದು ಮಠವನ್ನು ಸ್ಥಾಪಿಸಿ, ಈ ಕ್ಷೇತ್ರದಿಂದ ಒಂದು ಶಿಷ್ಯ ಪರಂ

* ಚರಪತಿಗಳನ್ನು ಕೂಡಿಕೊಂಡು ಚಿಕ್ಕಸಿದ್ಧೇಶ್ವರರು ಬಂದುದು ವಿಜಯನಗರದಿಂದ ಆಗಿರಬಹುದೆಂದು ಕೆಲವರ ತರ್ಕವಿದೆ. ಆದರೆ ಪದ್ಯದಲ್ಲಿ ಕಲ್ಯಾಣ ವಳಿಯಲು ಎಂದಿರುವುದರಿಂದ ಬಸವಣ್ಣನಿದ್ದ ಕಲ್ಯಾಣವೇ ಆಗಿರಬಹುದೆಂದು ನಾವು ಊಹಿಸಿದ್ದೇವೆ. ವಿಜಯನಗರಕ್ಕೂ "ವಿಜಯ ಕಲ್ಯಾಣ' ಎಂಬ ಹೆಸರೂ ಇತ್ತು ಮಾತ್ರ.

ಪರೆಯು ಬೆಳೆದು ಬರುವುದಕ್ಕೆ ಕಾರಣರಾದ ಶ್ರೀ ಗೋಸಲ ಸಿದ್ಧೇಶ್ವರ ಸ್ವಾಮಿಗಳವರಿಂದ 3 ನೆಯುವರಾದ (ಗೋಸಲ ಸಿದ್ಧೇಶ್ವರರ ಶಿಷ್ಯರ ಶಿಷ್ಯರ ಶಿಷ್ಯ) ಗೋಸಲ ಚನ್ನಬಸವೇಶ್ವರರ ಸಮಾಧಿ ಇರುವುದು ಇಲ್ಲಿಯೇ. ಇವರು ಸಿದ್ಧಗಂಗಾ ಕ್ಷೇತ್ರಾಧಿಪತಿಯಾದ ಶ್ರೀ ತೋಂಟದ ಸಿದ್ಧಲಿಂಗೇಶ್ವರರ ಗುರುಗಳೇ ಆಗಿದ್ದಾರೆ. 'ನಿರಂಜನ ವಂಶರತ್ನಾಕರ" ಗ್ರಂಥದ ಅಭಿಪ್ರಾಯದ ಪ್ರಕಾರ ಈ ಚೆನ್ನಬಸವೇಶ್ವರರು ಸಿದ್ಧಗಂಗಾ ಬೆಟ್ಟದ ಮೇಲಿನ ಗವಿಯಲ್ಲಿ ಅನುಷ್ಠಾನಾದಿಗಳನ್ನು ಮಾಡಿಕೊಂಡು ಲಿಂಗ ಜಂಗಮ ದಾಸೋಹಕ್ರಿಯೆಗಳನ್ನೆಸಗುತ್ತಿದ್ದ ಸಮಯದಲ್ಲಿ ಗುಬ್ಬಿಯಿಂದ ಮಲ್ಲಣ್ಣನು ಶ್ರೀ ಕ್ಷೇತ್ರಕ್ಕೆ ಬಂದು ಚೆನ್ನಬಸವ ರಾಜೇಂದ್ರ ಸ್ವಾಮಿಗಳನ್ನು ತನ್ನ ಗುಬ್ಬಿಗೆ ಕರೆದೊಯ್ದು 72 ಬಿರುದು ಸಮಿತಿ ಉತ್ಸವಾದಿಗಳನ್ನು ಮಾಡಿಸಿ, ಗಣಪರ್ವವನ್ನಾಚರಿಸಿ ಅವರಿಂದಲೇ ಅನುಗ್ರಹವನ್ನು ಪಡೆದನೆಂದು ತಿಳಿದು ಬರುವುದು. ಈ ಚೆನ್ನಬಸವರಾಜೇಂದ್ರ ಸ್ವಾಮಿಗಳೇ 'ಕ್ಷೇತ್ರಜ್ಞ ಸುಮನೋವಾದ'ವೆಂಬ ವೀರಶೈವ ಸಿದ್ಧಾಂತ ಪ್ರತಿಪಾದಕ ಗ್ರಂಥವನ್ನು ಬರೆದಿದ್ದಾರೆ. 'ಕರ್ನಾಟಕ ಸಂಸ್ಕೃತೋಭಯ ಕವಿತ್ವಂಗಳಂ ಪೂರ್ಣಲಕ್ಷಣ ಚಮತ್ಕಾರದಿಂದ ಮಾಳ್ಪನಿರ್ಣಯಕೆ ನೀನೆಯಗ್ಗಳವಲಾ! ಬಸವಪುರಾಣಾರ್ಣವಂ ಪೇಳ್ವೊಡೆ ಅರ್ಣವಪ್ರಾಂತ. ಭೂಮಿಯೊಳು ಪೆಸರಾಗಿರ್ದೆ' ಎಂದು ಜನ ಮಲ್ಲಣಾರ್ಯನನ್ನು ಹೊಗಳುತ್ತಿದ್ದರಂತೆ. ಬಸವಪುರಾಣ ಪ್ರವಚನದಲ್ಲಿ ಈತ ಬಹಳ ಗಟ್ಟಿಗನೆಂದು ತಿಳಿಯುವುದು. ಅಂತಯೇ ಇವನು ಹೇಳುವ ಬಸವಪುರಾಣವನ್ನು ಕೇಳಲು ಜನಜಂಗುಳಿಯಲ್ಲಿ ಎರಡು ಗುಬ್ಬಚ್ಚಿಗಳು ದಿನಾಲು ಬರುತ್ತಿದ್ದವಂತೆ ಪುರಾಣ ಪರಿಸಮಾಪ್ತಿಯೊಡನೆ ಅವೂ ಕೂಡ ಅಸುವನ್ನು ನೀಗಲು ಅವುಗಳನ್ನು ಸಮಾಧಿಮಾಡಿಸಿ ಮೇಲೆ ವೃಷಭ ಪ್ರತಿಷ್ಠೆಮಾಡಿ ಅದಕ್ಕೆ ಗುಬ್ಬಚ್ಚಿ ಬಸವನೆಂದು ಈಗಲೂ ಕರೆಯುವಂತಾಗಿದೆ. ಈ ಕಾರಣದಿಂದಲೇ ಈ ಅಮರಗೊಂಡಕ್ಕೆ ಗುಬ್ಬಿ ಎಂಬ ಹೆಸರು ಬಂದಿತೆಂದು ಅಖ್ಯಾಯಿಕೆಯಿದೆ. ಈ ಮಲ್ಲಣ್ಣಾರ್ಯನ ಹಿರಿಯರು ಶಿವಯೋಗನಿಷ್ಠಾಗರಿಷ್ಠರೂ, ಮಹಾ ದಾರ್ಶನಿಕರೂ, ಕವಿಗಳೂ ಆದವರೇ ಆಗಿದ್ದಾರೆ. ಬಸವಣ್ಣನವರ ಕಾಲದವರೆಗೂ ಇವರ ಹಿರಿಯರ ಚರಿತ್ರೆ ಹೋಗುತ್ತದೆ. ವಾತುಲಾಗಮಕ್ಕೆ ಟೀಕೆ ಬರೆದು "ಗಣಭಾಷಿತ ರತ್ನಮಾಲೆ'ಯೆಂಬ ವಚನಸಂಕಲನಗ್ರಂಥ ಬರೆದ ಗುಬ್ಬಿಯ ಮಲ್ಲಣ್ಣನೇ )ಕ್ರಿ.ಶ. 1475) ಇವನ ತಾತ. 'ಸಿದ್ಧೇಶ್ವರ ಪುರಾಣ' ಕರ್ತೃವಾದ ಶಾಂತೇಶ (ಕ್ರಿ. ಶ. 1561) ಈ ಮಲ್ಲಣ್ಣಾರ್ಯರ ಮಗ ಹೀಗೆ ವಿದ್ವಾಂಸರ, ಅನುಭಾವಿಗಳ ವಂಶದಲ್ಲಿ ಬೆಳೆದುಬಂದು ಪರಂಪರೆಯನ್ನು ಉಳಿಸಿದ ಮಲ್ಲಣಾರ್ಯ (ಕ್ರಿ. ಶ. 1513) ಸಿದ್ಧಗಂಗೆಯ ಸಂಬಂಧ ಸಂಪರ್ಕವನ್ನು ಇಟ್ಟುಕೊಂಡವನೆಂದು ತಿಳಿದು ಬರುವುದು. 'ಭೂಲೋಕ ಪಾವನ ಕಕುದ್ಗಿರಿ ಸುದಾಕ್ಷಿಣ್ಯ ಕೈಲಾಸವೆನಿಸಿದ್ದ' ಶಿವಗಂಗೆಯ ಮೇಗಣ ಗವಿಯ ಸಿಂಹಾಸನಾಧೀಶ ಶಾಂತನಂಜೇಶ್ವರನ ಶಿಷ್ಯನಾದ ಈತನಿಗೆ ಶಿವಗಂಗೆಯ ಸಂಬಂಧವೂ ವಿಶೇಷವಾಗಿತ್ತು. ಹೀಗೆ ಸಿದ್ಧಗಂಗೆ ಶಿವಗಂಗೆಗಳ ಸಂಬಂಧ ವಿಟ್ಟುಕೊಂಡ ಮಲ್ಲಣ್ಣನ ಊರಾದ ಗುಬ್ಬಿಯು ಸಿದ್ಧಗಂಗೆಯ ಪರಿಸರದ ಅತ್ಯಂತ ಮಹತ್ವದ ಪ್ರಾಚೀನ ಊರಾಗಿದೆ; ಶಿವಶರಣರ ಬೀಡಾಗಿದೆ. ಗುಬ್ಬಿಯ ಮಲ್ಲಣಾರ್ಯರ 'ವೀರಶೈವಾಮೃತ ಮಹಾಪುರಾಣ ಈ ಪರಿಸರದಲ್ಲಿನ ಅನೇಕ ಮಹಾಪುರುಷರ, ದಾರ್ಶನಿಕರ, ಶಿವಯೋಗಿಗಳ ಸಂಬಂಧವನ್ನು ತಿಳಿಸುವ ಮಹಾಗ್ರಂಥವಾಗಿ ಸಿದ್ಧಗಂಗಾ ಪರಿಸರದ ಮಹತ್ವವನ್ನು ಕುರಿತು ಬೆಳಕು ಚೆಲ್ಲಬಲ್ಲ ಸತ್ತ್ವಪೂರ್ಣ ವಿಶ್ವಕೋಶವಾಗಿದೆ. ಶಿವಗಂಗೆ ಗೂಳೂರು, ಗುಮ್ಮಳಾಪುರಗಳೇ ಮೊದಲಾದ ಅನೇಕ ಸ್ಥಾನಗಳ ಮಹತ್ವ ಈ ಗ್ರಂಥದಿಂದ ಸುವ್ಯಕ್ತವಾಗುತ್ತಿದೆ. ವೀರಶೈವ ಧರ್ಮೇತಿಹಾಸದಲ್ಲಿ ಗುಬ್ಬಿ ಅತ್ಯಂತ ಮಹತ್ವ ಸ್ಥಾನವಿಶೇಷವೆನಿಸಿದೆ.

3) **ಗೂಳೂರು :** ಸಿದ್ಧಗಂಗಾ ಕ್ಷೇತ್ರಕ್ಕೆ ಕೇವಲ 3–4 ಮೈಲು ನೈಋತ್ಯಕ್ಕೆ ಇರುವ ಸುಪ್ರಸಿದ್ಧವಾದ ಗೂಳೂರು ವೀರಶೈವ ಕ್ರಾಂತಿಯ ಇತಿಹಾಸದಲ್ಲಿ ಹೆಸರಿಸಬೇಕಾದ ಒಂದು ಮಹತ್ವದ ಸ್ಥಳವಾಗಿದೆ. ಈ ಗೂಳೂರನ್ನು ವೃಷಭಪುರಿಯೆಂದೂ ಅನೇಕ ಗ್ರಂಥಗಳಲ್ಲಿ ಕರೆಯಲಾಗಿದೆ. 'ಗೂಳೂರು' ಎಂಬ ಕನ್ನಡ ಪದದ ಸಂಸ್ಕೃತ ರೂಪ ಇದು. ಶಿವಗಂಗೆಯಿಂದ 7–8ಮೈಲು

3) ಶ್ರೀ ಚೆನ್ನಮಲ್ಲಿಕಾರ್ಜುನ : ರೇವಣ್ಣಸಿದ್ಧರು, ಪು. 220
4) ಅದೇ ಪು. 218, 219, 232, 233, 244, 388, 389.



ಪಶ್ಚಿಮಕ್ಕಿರುವ ಈ ಊರಿನಲ್ಲಿ ಮಹಾದಾರ್ಶನಿಕನೂ ಗುಮ್ಮಳಾಪುರದ ಸಿದ್ಧವೀರಣಾರ್ಯರ ತರುವಾಯ ತೋಂಟದ ಸಿದ್ಧಲಿಂಗೇಶ್ವರರ ಪರಂಪರೆಯಲ್ಲಿ ಹರದನಹಳ್ಳಿಯ ಶೂನ್ಯ ಸಿಂಹಾಸನಾಧಿಪತಿಯೂ ಆಗಿದ್ದ ಸಿದವೀರ್ಧಣಾರ್ಯರ ಊರಾಗಿದೆ. ಇವರಿಗೆ ಗೂಳೂರು ಸಿದ್ಧವೀರಣ್ಣೊಡೆಯ ಎಂದೂ ಕರೆಯಲಾಗುತ್ತಿದೆ. ನಮಃಶಿವಾಯದೇವರು ಇವರ ವಿದ್ಯಾಗುರುಗಳು. ಇವರು ಬರೆದ ಶೂನ್ಯ ಸಂಪಾದನೆಯೆಂಬ ಶ್ರೇಷ್ಠತಮ ಗ್ರಂಥ ಕನ್ನಡ ಸಾಹಿತ್ಯೇತಿಹಾಸದಲ್ಲಿ ಅತ್ಯಂತ ಮಹತ್ವ ಸ್ಥಾನ ಪಡೆದಿದೆ. ತಾವು ಬರೆದ ಈ ಶೂನ್ಯ ಸಂಪಾದನೆಯಲ್ಲಿ "ಶ್ರೀ ಮದ್ಬೋಧಾಗುರು ನಮಃಶಿವಾಯ ದೇವರ ದಿವ್ಯಪದಕಮಲಕ್ಕೆ ಈ ಸಂಪಾದನೆಯ ದಿವ್ಯ ಜ್ಞಾನವಚನಾಮೃತವ ಬರೆದು ಸಮರ್ಪಿಸಿದೆನು. ಗುರುವೇ, ಎನ್ನ ತಪ್ಪನ್ನೊಪ್ಪಿಗೊಂಡು ಎನ್ನಂಗ ಮನಂಗಳಲ್ಲಿ ಮೂರ್ತಿಗೊಂಡು ನಿಮ್ಮ ಚಿದಂಘ್ರಿಯೊಳೆನ್ನನಿಂಬಿಡಯ್ಯ ಶಾಶ್ವತ ಗುರುವೇ ಶರಣಾರ್ಥಿ " ಎಂದು ತನ್ನ ಆತ್ಯಂತಿಕ ಗುರುಭಕ್ತಿಯನ್ನು ಪ್ರಕಟಿಸಿಕೊಂಡಿದ್ದಾರೆ. ಇವರು 'ನಮಃಶಿವಾಯಗುರುವೇ' ಎಂಬ ಅಂಕಿತದಲ್ಲಿ ವಚನಗಳನ್ನೂ ಬರೆದಿರಲು ಸಾಧ್ಯವಿದೆ ಎಂದು ವಿದ್ವಾಂಸರು ತರ್ಕಿಸಿದ್ದಾರೆ. ತಾವು ತಮ್ಮ ಶೂನ್ಯಸಂಪಾದನೆಯನ್ನು 'ತೋಂಟದ ಸಿದ್ಧಲಿಂಗ ಸದ್ಗುರು ವರನಾಥನ ಆದರದೊಳಿರ್ಪ ಬೋಳಬಸವೇಶಾರ್ಯರ ಸತ್ಕರುಣವನಾಂತು' ಬರೆದುದಾಗಿ ಅವರ ಈ ಗ್ರಂಥದಿಂದಲೇ ತಿಳಿದುಬರುವುದು. ಗೂಳೂರು ಸಿದ್ಧವೀರಣ್ಣೊಡೆಯರು ತೋಂಟದ ಸಿದ್ಧಲಿಂಗೇಶ್ವರರ ಪರಂಪರೆಯ ಶೂನ್ಯಸಿಂಹಾಸನಾಧಿಪತಿಗಳಾದುದರಿಂದಲೂ, ಪ್ರಭುದೇವರ ಮಹತ್ತು ಬೃಹತ್ತುಗಳನ್ನು ಪ್ರಕಟಗೊಳಿಸುವ ಶೇಷ್ಠಮಟ್ಟದ ಶೂನ್ಯಸಂಪಾದನೆಯ ಕರ್ತೃಗಳಾದುದರಿಂದಲೂ, ಸಿದ್ಧಲಿಂಗೇಶ್ವರರ ಶ್ರೀಕ್ಷೇತ್ರವಾದ ಸಿದ್ಧಗಂಗೆಗೆ ಸಮೀಪದವರೇ ಆದುದರಿಂದಲೂ ಇವರು ಸಿದ್ಧಗಂಗೆಗೆ ಅತ್ಯಂತ ಸಂಬಂಧವುಳ್ಳವರು, ಸಿದ್ಧಗಂಗೆಗೆಯ ಪರಿಸರದ ಮಹತ್ವವನ್ನು ಸಾರಲು ಗೂಳೂರು ಮತ್ತು ಅಲ್ಲಿನ ಸಿದ್ಧವೀರಣ್ಣೊಡೆಯರು ಪ್ರತ್ಯಕ್ಷ ನಿದರ್ಶನ. ಗೂಳೂರಿನಲ್ಲಿ ಅನೇಕ ವೀರಶೈವ ಮಠಗಳ ಅವಶೇಷಗಳನ್ನು ನೋಡುಬಹುದಾಗಿದೆ. ಸಂಪಾದನೆಯ ಚನ್ನಂಜೇದೇವ, ಗುರುಲಿಂಗದೇವರೇ ಮೊದಲಾದ ಸುಪ್ರಸಿದ್ಧ ದಾರ್ಶನಿಕರೂ ಇದೇ ಗೂಳೂರಿನವರೇ ಎಂಬುದು ಇನ್ನೂ ವಿಶೇಷ ಸಂಗತಿ.

4) **ಕೈದಾಳ :** ಗೂಳೂರಿನ ಪಕ್ಕದಲ್ಲಿರುವ ಕೈದಾಳಕ್ಷೇತ್ರ ಕರ್ನಾಟಕದ ಶಿಲ್ಪಕಲೆಯಲ್ಲಿ ಆಚಾರ್ಯ ಪುರುಷನೆಂದು ಕೀರ್ತಿತನಾಗಿರುವ ಜಕ್ಕಣಾಚಾರ್ಯನ ಜನ್ಮಸ್ಥಳ. ಈ ಸ್ಥಳವೂ ಸಿದ್ಧಗಂಗೆಯಿಂದ ನೈಋತ್ಯಕ್ಕೆ 3-4 ಮೈಲುಗಳ ಅಂತರವುಳ್ಳದ್ದು. ಈಗಲೂ ಇಲ್ಲಿರುವ ದೇವಾಲಯದ ಶಿಲ್ಪಕಲೆ ಸಂದರ್ಶಕರನ್ನು ಮಂತ್ರಮುಗ್ಧರನ್ನಾಗಿ ಮಾಡುವ ಅಂತಸ್ಸತ್ತ್ವದಿಂದ ಕೂಡಿದೆ. ಪ್ರಾಚೀನ ಕಾಲದಿಂದಲೂ ಶಿಲ್ಪಶಾಸ್ತ್ರಾಚಾರ್ಯರು ಹುಟ್ಟಿ ಬೆಳೆಯಬೇಕಾದುದರ ಹಿನ್ನಲೆಯಲ್ಲಿ ಅವರಿಗೆ ಆಶ್ರಯವೀಯುತ್ತಿದ್ದ ರಾಜ ಮಹಾರಾಜರ ಬಗೆಗೂ ವಿಚಾರ ಮಾಡಬೇಕಾಗುತ್ತದೆ.

5) **ಮಣ್ಣೆ :** ಸಿದ್ಧಗಂಗೆಗೆ ನೇರ ಪೂರ್ವದಲ್ಲಿ ಸುಮಾರು 12-14 ಮೈಲುಗಳ ದೂರದಲ್ಲಿ ಮಣ್ಣೆ ಎಂಬ ಗ್ರಾಮವು ಚೋಳರ ಕರ್ನಾಟಕದ ರಾಜಧಾನಿಯಾಗಿತ್ತೆಂದು ಇತ್ತೀಚೆಗೆ ಅಲ್ಲಿ ಸಿಕ್ಕ ಅವಶೇಷಗಳಿಂದ ತಿಳಿದುಬಂದಿದೆ. ಆ ಊರನ್ನು ಹಿಂದೆ ಮಾನ್ಯಪುರ, ಮಣಿಪುರ, ರತ್ನಪುರ ಎಂದು ಕರೆಯಲಾಗುತ್ತಿತ್ತು. ಅಲ್ಲಿರುವ ಸೋಮೇಶ್ವರ ದೇವಾಲಯ ಮನೋಹರವಾಗಿದೆ. ಇದು ಸಿದ್ಧಂಗಗಾ ಪರಿಸರದ ಅತ್ಯಂತ ಮಹತ್ವದ ಐತಿಹಾಸದ ಸ್ಥಾನವಾಗಿದೆ.

6) **ಶಿವಗಂಗಾ ಕ್ಷೇತ್ರ :** ಬಹು ಪ್ರಾಚೀನ ಕಾಲದಿಂದಲೂ ಶಿವಗಂಗೆ-ಸಿದ್ಧಂಗಗೆ ಎರಡು ಕ್ಷೇತ್ರಗಳ ಸಂಬಂಧ ಜನಜೀವನದಲ್ಲಿ ಹಾಸುಹೊಕ್ಕು. ಸಿದ್ಧಗಂಗೆಯನ್ನು ನೋಡಿ ಶಿವಗಂಗೆಗೂ, ಶಿವಂಗಗೆಯನ್ನು ನೋಡಿ ಸಿದ್ಧಂಗಗೆಗೂ ಬರುವುದು ಇಂದಿಗೂ ಜನರಲ್ಲಿ ಉಳಿದು ಬಂದಿರುವ ಶ್ರದ್ಧಾವಿಶೇಷ. 'ಶಿವಗಂಗೆಯ ನೋಟಕ್ಕೆ, ಸಿದ್ಧಗಂಗೆಯ ಊಟ ಚಂದ, ಶಿವಗಂಗೆಯ ನೋಟಚಂದ' ಎಂಬ ಗಾದೆಗಳು ಇನ್ನೂ ಜನಜಂಗುಳಿಯ ಬಾಯಲ್ಲಿ ಉಳಿದು ಬಂದಿರುವ ಮಾತಾಗಿವೆ. ಈ ಎರಡೂ ಕ್ಷೇತ್ರಗಳು ಕೇವಲ 8-9 ಮೈಲುಗಳ ಅಂತರದಲ್ಲಿದ್ದು ವೀರಶೈವ ಕ್ರಾಂತಿಯ ಇತಿಹಾಸದಲ್ಲಿ ಇವುಗಳ ಮಹತ್ವ ಅತ್ಯಂತ ಕುತೂಹಲಕಾರಿಯಾದುದು. ಸುತ್ತಮುತ್ತಣ ಪ್ರದೇಶಕ್ಕೆ ಶಿವಶರಣರ ತತ್ವಪ್ರಸಾರ ಮಾಡುವಿಕೆಯಲ್ಲಿ ಈ ಎರಡೂ ಕ್ಷೇತ್ರಗಳಿಗೆ ಅತ್ಯಂತ ಮಹತ್ವ ಬಂದಿದೆ. ಶಿವಗಂಗೆಗೆ

ಇರುವಷ್ಟು ಪ್ರಾಚೀನ ಚರಿತ್ರೆಯ ದಾಖಲೆಗಳು ಸಿದ್ಧಗಂಗೆಗೆ ಇರದಿದ್ದರೂ ಸಿದ್ಧಗಂಗೆಯು ಪ್ರಾಚೀನ ಕಾಲದಿಂದಲೂ ಸಿದ್ಧಪುರುಷರ ನಿವಾಸಸ್ಥಾನವಾಗಿರಲಿಕ್ಕೆ ಸಾಕೆಂಬುದನ್ನು ಇಲ್ಲಿನ ಬೆಟ್ಟದಲ್ಲಿರುವ ಅನೇಕ ಪ್ರಾಚೀನ ಗುಹೆಗಳು ಸಾರುತ್ತಿವೆ. ಶಿವಗಂಗೆಗೆ ಅನೇಕವರ್ಷಗಳ ಚರಿತ್ರೆಯಿದ್ದರೂ 12ನೇ ಶತಮಾನದ ನಂತರ ಈ ಕ್ಷೇತ್ರದಲ್ಲಿ ವೀರಶೈವರ ಅದ್ಭುತ ಕ್ರಾಂತಿ ನಡೆದಿದೆ. ಇದೊಂದು ಸೂರ್ಯನಿದ್ದ ಹಾಗೆ. ಅದರ ಕಿರಣಗಳು ಹರದನಹಳ್ಳಿ, ಗುಮ್ಮಳಾಪುರ, ಗುಬ್ಬಿ, ಸಿದ್ಧಂಗಗೆ, ಕಲ್ಲೆಯ, ವಿಜಯನಗರ, ಶ್ರೀಶೈಲದವರೆಗೂ ಹರಡಿದ್ದವು ಸಿದ್ಧಗಂಗಾಧಿಪತಿಗಳಾದ ಶಿವಕುಮಾರ ಸ್ವಾಮಿಗಳು "ನನ್ನ ಬಾಲ್ಯದಲ್ಲಿ ಶಿವಗಂಗಾಕ್ಷೇತ್ರ ನನ್ನ ಮೇಲೆ ಮಹತ್ತರವಾದ ಪ್ರಭಾವ ಬೀರಿದೆ" ಎಂದು ಹೇಳಿಕೊಳ್ಳುತ್ತಿದ್ದಾರೆ. ಇಂದಿಗೂ ಶಿವಗಂಗೆಯ ಸುತ್ತಮುತ್ತಣ ಊರಿನ ಜನಗಳು ಪ್ರಾತಃಕಾಲ ಎದ್ದು ಮೊದಲ ಶಿವಗಂಗೆ ಬೆಟ್ಟ ನೋಡಿ ಕೈಮುಗಿಯುವ ಪರಿಪಾಠವನ್ನಿಟ್ಟು ಕೊಂಡಿದ್ದಾರೆ. ಶಿವಗಂಗೆಯ ಚರಿತ್ರೆಯನ್ನು ಅಗಸ್ತ್ಯ, ಮುದ್ಗಲ, ಕಣ್ವಾದಿ ಋಷಿಗಳ ವರೆಗಿನ ಪ್ರಾಗೈತಿಹಾಸಿಕ ಕಾಲದವರೆಗೂ ಎಳೆದುಕೊಂಡು ಹೋಗಲಾಗುತ್ತಿದೆ. ಆದರೆ ಈ ಬಗೆಗೆ ಹೆಚ್ಚು ಸಾಕ್ಷಾಧಾರಗಳು ಬೇಕಾಗುತ್ತವೆ. ಈಗಿನ ಅವಶೇಷಗಳಿಂದ ಸುಮಾರು 1200 ವರ್ಷಗಳ ಚರಿತ್ರೆಯ ಮೇಲೆ ಬೆಳಕು ಚೆಲ್ಲಿದೆ. ಕ್ರಿ.ಶ. 8ನೆಯ ಶತಮಾನದ ಶಂಕರಾಚಾರ್ಯರ ಸಂಬಂಧವನ್ನು ಈ ಕ್ಷೇತ್ರಕ್ಕೆ ಹೇಳಲಾಗುತ್ತಿದೆ. ಇದು ಸು ಪ್ರ ಸಿ ದ್ಧ ಶೈವಕ್ಷೇತ್ರವಾಗಿರುವಂತೆಯೇ ಜೈನರ ಸಾಂಸ್ಕೃತಿಕ ಕ್ಷೇತ್ರವೂ ಆಗಿದೆ. ಹೊಯ್ಸಳ ವಿಷ್ಣುವರ್ಧನ ಪಟ್ಟಮಹಿಷಿಯಾದ ಶಾಂತಲೆಯು ಇಲ್ಲಿ ಬಸದಿಗಳನ್ನು ಕಟ್ಟಿಸಿದಳೆಂದೂ, ಕೊನೆಗೆ ಇಲ್ಲಿಯೇ ಕ್ರಿ. ಶ. 1131 ರಲ್ಲಿ ಸಮಾಧಿ ಮರಣವನ್ನಪ್ಪಿದಳೆಂದೂ ಹೇಳಲಾಗುತ್ತಿದೆ.[5]

ಇಂದಿಗೂ ಶಿವಗಂಗೆಯಲ್ಲಿ ವರ್ಷಕ್ಕೊಮ್ಮೆ ಆಚರಿಸಲಾಗುತ್ತಿರುವ 'ಶಾಂತಮ್ಮನ ಹಬ್ಬ'ವೆಂಬ ಹಬ್ಬ ಈ ಚರಿತ್ರೆಗೆ ಪುಷ್ಟಿಯನ್ನು ಕೊಡುವ ಒಂದು ಅಂಶವಾಗಿದೆ. ಅದೇನೇ ಇರಲಿ ವೀರಶೈವೇತಿಹಾಸದಲ್ಲಿಯಂತೂ 12 ಶತಮಾನದಿಂದೀಚೆಗೆ ಈ ಕ್ಷೇತ್ರ ಬಹಳಷ್ಟು ಚರಿತ್ರೆಯನ್ನಡಗಿಸಿಕೊಂಡಿರುವುದಂತೂ ನಿಶ್ಚಯ. ಈಗ ಈ ಕ್ಷೇತ್ರದಲ್ಲಿ ಅಳಿದುಳಿರುವ ಮಠಮಾನ್ಯಗಳ ದಾಖಲೆಗಳಿಂದ, ಅವಶೇಷಗಳಿಂದ, ಸುಮಾರು ಪಂಚಪೀಠಗಳ ಐದು ಮಠಗಳೂ ಸೇರಿ 64 ಮಠಗಳು ಇದ್ದವೆಂದು ತಿಳಿದುಬರುವುದು. ಇವು ಬೆಟ್ಟದ ಮೇಲೂ ಕೆಳಗೂ ಇದ್ದವು. ಕೆಲವು ಕಡೆ ಗುಹೆಗಳೇ ಮಠಗಳಾಗಿದ್ದವು. ಇವುಗಳಲ್ಲಿ ಇಂದಿಗೂ ಬೆಟ್ಟದ ಮೇಲ್ಭಾಗದಲ್ಲಿ ರೇವಣಸಿದ್ಧೇಶ್ವರರು ಮತ್ತು ರುದ್ರಮುನಿಶಿವಾಚಾರ್ಯರ ಸಂಬಂಧದ ಮೇಲಣ ಗವಿಮಠ ಮತ್ತು ಹೊನ್ನಮ್ಮನ ಗವಿಮಠಗಳ ಹೆಸರನ್ನು ಹೇಳಬಹುದು. ಕಲ್ಲೆಯದಲ್ಲಿ 64 ಶೀಲಗಳನ್ನು ಆಚರಿಸಿಕೊಂಡಿದ್ದು ಪಾಲ್ಕುರಿಕೆ ಸೋಮನಾಥರಂಥ ವೀರಶೈವಾಚಾರ್ಯ ಮಹಾಪುರುಷರನ್ನು ಡಂಗುಬಡಿಸಿದ ಸರ್ವಶೀಲೆ ಚನ್ನಮ್ಮನಂತಯೇ ಶಿವಗಂಗೆಯಲ್ಲೂ 64 ಶೀಲಗಳನ್ನು ಆಚರಿಸುತ್ತಿದ್ದ ಹೊನ್ನಮ್ಮನೆಂಬ ಶಿವಶರಣೆಯಿದ್ದಳೆಂದೂ ಅವಳ ಕಾರಣದಿಂದಲೇ ಹೊನ್ನಮ್ಮನ ಗವಿಮಠವು ಅಸ್ತಿತ್ವದಲ್ಲಿ ಬಂದಿತೆಂದೂ ಅವಳು ತ್ರಿವಿಧ ದಾಸೋಹ ಸದ್ಭಾವಿನಿಯಾಗಿದ್ದಳೆಂದೂ ಪ್ರಸಿದ್ಧಸಂಶೋಧಕರಾದ ಚೆನ್ನಮಲ್ಲಿಕಾರ್ಜುನರ ಅಭಿಪ್ರಾಯವಾಗಿದೆ.[6] ಈ ಮಠ ಉಜ್ಜಯಿನಿ ಮರುಳಸಿದ್ಧರ ಪೀಠಕ್ಕೆ ಸೇರಿದ ಮಠವೆಂದೂ ಈಗ ಕರೆಯಲಾಗುತ್ತಿದೆ. ಈಗಿರುವ ಹೊನ್ನಮನ ವಿಗ್ರಹ ಪಾರ್ವತಿಯ ಆಕಾರದಲ್ಲಿ ಕಡೆದು ಗಂಗಾಧರೇಶ್ವರ ದೇವಾಲಯವಿರುವುದರಿಂದ ಎಲ್ಲಾ ಕಡೆಗೂ ಇದ್ದ ಹಾಗೆ ಪಾರ್ವತಿಯ ದೇವಾಲಯವನ್ನು ಮಾಡಿ ಆ ವಿಗ್ರಹಕ್ಕೆ ಹೊನ್ನಮ್ಮ ಎಂದು ಕರೆಯುತ್ತಿರಬಹುದು. ಹೊನ್ನಮ್ಮ ಎಂಬುದರ ಸಂಸ್ಕೃತ ರೂಪಾಂತರವೇ 'ಸ್ವರ್ಣಾಂಬಾ'. ಬೆಟ್ಟದ ಕೆಳಭಾಗದಲ್ಲಿ 'ಮರಿಯಮ್ಮ'ನ ದೇವಾಲಯವೊಂದು ಇದ್ದು ಇದು ಮರಿಹೊನ್ನಮ್ಮ ಎಂಬುದರ ಸಂಕ್ಷೇಪರೂಪವಾಗಿದೆ.

ಎಡಗೈಯಲ್ಲಿ ಲಿಂಗವನ್ನು ಹಿಡಿದಿರುವ ವಿಗ್ರಹಗಳನ್ನು ಶಿವಂಗಗೆಯಲ್ಲಿ ಕಾಣಬರುವಷ್ಟು ಇನ್ನೆಲ್ಲಿಯು ನಾವು ನೋಡಲಾಗುವುದಿಲ್ಲ. ಅದರಂತೆಯೇ ಶಿವಗಂಗೆಯಲ್ಲಿ ಮತ್ತು ಅದರ ಸುತ್ತಮುತ್ತಲ ಪ್ರದೇಶದಲ್ಲಿರುವಷ್ಟು ವೀರಭದ್ರನ ಮೂರ್ತಿಗಳನ್ನು ಇನ್ನೆಲ್ಲಿಯೂ ನಾವು ನೋಡಲಾರೆವು.

5) ಶ್ರವಣಬೆಳಗೊಳದ ಒಂದು ಶಾಸನ.

6) ಚೆನ್ನಮಲ್ಲಿಕಾರ್ಜುನ : ರೇವಣ್ಣಸಿದ್ಧೇಶರರ ಚರಿತ್ರೆ, ಪು. 394



ಇವುಗಳಲ್ಲಿ ಮುಖ್ಯವಾಗಿ ಶಿವಗಂಗೆಯಲ್ಲಿರುವ 8-10 ವೀರಭದ್ರಮೂರ್ತಿಗಳನ್ನು ಬಿಟ್ಟು ಈ ಪರಿಸರದಲ್ಲಿ ಪ ಕ್ಕ ದ ಸಿದ್ಧನಬೆಟ್ಟ (ನಿಜಗಲ್ಲುಬೆಟ್ಟ)ದಲ್ಲಿರುವ ಉದ್ಭಾನವೀರಭದ್ರ, ಅದರ ಪಕ್ಕದಲ್ಲಿಯೇ ಇ ರು ವ ದೇವರ ಹೊಸಳ್ಳಿಯ ವೀರಭದ್ರ, ಹರಳೂರು, ಸಾವನದುರ್ಗ, ಹುತ್ತರಿದುರ್ಗ, ಹುಲಿಯೂರುದುರ್ಗ, ತುಮಕೂರು, ಹೊನ್ನುಡಿಕೆ, ನೆಲಮಂಗಲಗಳಲ್ಲಿರುವ ವೀರಭದ್ರಮೂರ್ತಿಗಳೂ, ಬೆಂಗಳೂರಿನ ಪ್ರಳಯಕಾಲ ವೀರಭದ್ರಮೂರ್ತಿಯೂ, ತುಮಕೂರು ತಾಲ್ಲೋಕು ಅಗ್ರಹಾರದ ವೀರಭದ್ರ, ಎಡೆಯೂರಿನಲ್ಲಿರುವ ವೀರಭದ್ರಮೂರ್ತಿಗಳನ್ನು ಹೆಸರಿಸಬಹುದು. ಈ ಎಲ್ಲಾ ವೀರಭದ್ರಮೂರ್ತಿಗಳೂ ರೇವಣಸಿದ್ಧೇಶ್ವರರು ಈ ಭಾಗದಲ್ಲಿ ಎಸಗಿದ, ವೀರಶೈವಕ್ರಾಂತಿಯ ಫಲವಾಗಿ ಈ ಪರಿಸರದಲ್ಲಿ ಮೂಡಿಬಂದಿವೆ, ಎಂಬುದನ್ನು ನಿರ್ವಿವಾದವಾಗಿ ಒಪ್ಪಿಕೊಳ್ಳಬೇಕಾಗುತ್ತದೆ. ಈ ವೀರಭದ್ರಮೂರ್ತಿ ಪ್ರತಿಷ್ಠಾಪನೆ ರೇವಣಸಿದ್ಧೇಶ್ವರರ ಕಾಲದಲ್ಲಾಗಿರಬಹುದು ಅಥವಾ ಈಚೆಗಾಗಿರಬಹುದು. ರೇವಣಸಿದ್ಧ, ಮರುಳಸಿದ್ಧ, ಸಿದ್ಧರಾಮೇಶ್ವರರು ಕಲ್ಯಾಣದ ಬಸವಾದಿ ಪ್ರಮಥರ ಕ್ರಾಂತಿಯ ರಾಜಕೀಯ ವಿಪ್ಲವ ಶಾಂತಗೊಂಡ ಮೇಲೆ ದಕ್ಷಿಣ ಭಾಗದಲ್ಲಿ ಶಿವಗಂಗಾಪ್ರಾಂತದಲ್ಲಿ ತಮ್ಮ ಪಾಲಿನ ಕೆಲಸವನ್ನು ಬಹು ಚುರುಕಾಗಿ ನಿಂತು ಮಾಡಿದ್ದಾರೆಂಬುದಕ್ಕೆ ಬೇಕಾದಷ್ಟು ಕುರುಹುಗಳು ಈ ಪರಿಸರದಲ್ಲಿ ಇರುವುದೇ ಸಾಕ್ಷಿಯಾಗಿದೆ. ಇವರ ಅನಂತರ 14ನೇ ಶತಮಾನದ ಆದಿಯಲ್ಲಿದ್ದ ಹರದನಹಳ್ಳಿಯ ಪೀಠಾಚಾರ್ಯರಾದ ಗೋ ಸ ಲ ಸಿದ್ಧೇಶ್ವರರು ಮೊದಲ್ಗೊಂಡು 18ನೆಯ ಶತಮಾನದವರೆಗೆ ಮಹತ್ತರವಾದ ಧರ್ಮಜಾಗೃತಿಯನ್ನು ಈ ಭಾಗದಲ್ಲಿ ಮಾಡಿ ಬಸವಾದಿ ಪ್ರಮಥರ ಕ್ರಾಂತಿಯ ಕಿಡಿ ಈ ಭಾಗದಲ್ಲಿ ಆರಗೊಡದಂತೆ ನೋಡಿಕೊಂಡಿದ್ದಾರೆ. ಇವರಲ್ಲಿ ಮುಖ್ಯವಾಗಿ ಜಂಗಮರು, ಗುರುಸ್ಥಲದವರು, ಶಿವಾನುಭವಿಗಳು, ಕವಿಗಳು, ದಾರ್ಶನಿಕರು ಸೇರಿದ್ದಾರೆ. ಗೋಸಲಸಿದ್ಧೇಶ್ವರರು, ಶಂಕರಸ್ವಾಮಿಗಳು, ಚೆನ್ನಬಸವೇಶ್ವರರು, ತೋಂಟದ ಸಿದ್ಧಲಿಂಗೇಶ್ವರರು, ಬೋಳಬಸವೇಶ್ವರರು, ಗುಮ್ಮಳಾ ಸಿದ್ಧವೀರದೇವರು, ಗೂಳೂರು ಸಿದ್ಧವೀರಣ್ಣೊಡೆಯರು, ಶೀಲವಂತಾರ್ಯ ಇವರ ಶಿಷ್ಯರಾದ ಹಲಗೆಯದೇವರು, ಗಗನದಾರ್ಯರು, ಕೆಂಚವೀರಣ್ಣೊಡೆಯರು, ಕಟ್ಟಿಗೆಹಳ್ಳಿಯ ಸಿದ್ಧಲಿಂಗೇಶ್ವರರು, ಗುಬ್ಬಿಯ ಮಲ್ಲಣ್ಣ, ಅವರ ಮೊಮ್ಮಗನಾದ ಮಲ್ಲಣಾರ್ಯ, ಮಲ್ಲಣಾರ್ಯರ ಮಗ ಶಾ ಂ ತೇ ಶ, ವಿರಕ್ತತೋಂಟದಾರ್ಯ, ಗುಮ್ಮಳಾಪುರದ ಶಾಂತೇಶ[7], ಗುಮ್ಮಳಾಪುರದ ಈ ಶಾಂತೇಶನ ದೌಹಿತ್ರನಾದ ಹಲಗ=ಇವರೇ ಮೊದಲಾದವರು ಸಿದ್ಧಗಂಗೆ ಮತ್ತು ಶಿವಗಂಗೆಯ ಪರಿಸರದಲ್ಲಿ ಒಂದಿಲ್ಲೊಂದು ರೀತಿಯಲ್ಲಿ ಧರ್ಮಜಾಗೃತಿಗೈದ ಮಹಾಪುರುಷರೇ ಆಗಿದ್ದಾರೆ.

7) **ಕಲ್ಲೆಯ :** ಸಿದ್ಧಗಂಗೆ ಮತ್ತು ಶಿವಗಂಗೆಯ ಪರಿಸರದ ಅತ್ಯಂತ ಮಹತ್ವದ ಇನ್ನೊಂದು ವೀರಶೈವ ಮಹಾಕ್ಷೇತ್ರವೆಂದರೆ ಮಾಗಡಿ ತಾಲ್ಲೋಕಿನಲ್ಲಿರುವ ಕಲ್ಲೆಹ ಅಥವಾ ಕಲ್ಲೆಯವಾಗಿದೆ. ಈಗ 'ಕಲ್ಯ' ಎಂದೂ ಕರೆಯಲಾಗುತ್ತಿದೆ. ಇಲ್ಲಿ ಬೆಟ್ಟದ ಮೇಲಿರುವ ಸರ್ವಶೀಲೆ ಚೆನ್ನಮ್ಮನವರ ಮಠ ಅತ್ಯಂತ ಕುತೂಹಲಕರವಾದ ಗವಿಯೇ ಆಗಿದೆ. ಈ ಕಲ್ಲೆಯದಲ್ಲಿ ಕೇತಿಶೆಟ್ಟಿಯೆಂಬ ಪ್ರಸಿದ್ಧ ವೀರಶೈವ ಮಹಾಪುರುಷನೂ ಆಗಿ ಹೋಗಿದ್ದಾನೆ. ಆತನು ಆ ಕಾಲದಲ್ಲಿ ಗುರುಲಿಂಗಜಂಗಮಕ್ಕೆ ಲಕ್ಷ ಲಕ್ಷ ಸಂಖ್ಯೆಯ ವಿತ್ತವನ್ನು ವೆಚ್ಚಮಾಡಿದನೆಂದು ತಿಳಿದುಬಂದಿದೆ. ಈ ಕಲ್ಲೆಯ 12-13ನೆಯ ಶತಮಾನಗಳಲ್ಲಿ ಪ್ರಸಿದ್ಧ ವೀ ರ ಶೈ ವ ಶಿವಶರಣರಿಂದ ಕೂಡಿದ ಪುಣ್ಯಕ್ಷೇತ್ರವಾಗಿತ್ತು. ಇಲ್ಲಿ, ವೀರಶೈವದ 64 ಶೀಲಗಳನ್ನು ಆಚರಿಸುತ್ತ ಲಿಂಗಜಂಗಮ ದಾಸೋಹ ಮಾಡುತ್ತಿದ್ದ ಸರ್ವಶೀಲೆ ಚೆನ್ನಮ್ಮನವರ ಕಥೆಯನ್ನು ಎಲ್ಲಾ ವೀರಶೈವ ಗ್ರಂಥಗಳು ಸಾರುತ್ತಿವೆ. 13ನೆಯ ಶತಮಾನದ ಆದಿಯಲ್ಲಿ ಆಂಧ್ರದ ಶ್ರೀಶೈಲ, ವಾರಂಗಲ್ಲು ಪ್ರಾಂತದಲ್ಲಿದ್ದ ಮಹಾಕವಿಗಳೂ, ಭೃಂಗೀಶ್ವರಾವತಾರಿಯೆನಿಸಿದವರೂ, ಬಸವಪುರಾಣವನ್ನು ಆಂಧ್ರಭಾಷೆಯಲ್ಲಿ ಬರೆದವರೂ ಆದ ಪಾಲ್ಕುರಿಕೆ ಸೋಮನಾಥರು ಸರ್ವಶೀಲೆ ಚೆನ್ನಮ್ಮನವರನ್ನು ಸಂದರ್ಶಿಸುವ ನಿಮಿತ್ತ ಅನೇಕ ಶಿವಶರಣರೊಡನೆ ಬಂಡಿಯನ್ನು ಹೂಡಿಸಿಕೊಂಡು ಪಂಚನಂದಿಗೆ ಪ್ರಥಮತಃ ಬಂದು, ಅಲ್ಲಿಂದ ಶಿವಗಂಗೆಗೂ, ಶಿವಗಂಗೆಯಿಂದ ಕಲ್ಲೆಯಕ್ಕೂ ಬಂದರು ; ಚೆನ್ನಮ್ಮನವರ 64 ಶೀಲಗಳ ಆಚರಣೆಯನ್ನು ಕಂಡು ಮಂತ್ರಮುಗ್ಧರಾಗಿ ನಮಸ್ಕರಿಸಿ ತಮ್ಮೂರಿಗೆ ಹೋಗಲು ಅಪ್ಪಣೆ

(22 ನೇ ಪುಟನೋಡಿ)

7) ಈ ಶಾಂತೇಶ ಗುಬ್ಬಿಯ ಶಾಂತೇಶನಿಗಿಂತ ಭಿನ್ನವಾದ ಇನ್ನೊಬ್ಬ ಶಾಂತೇಶ. ಈತನನ್ನು ಗುಬ್ಬಿಯ ಶಾಂತೇಶ ಹೊಗಳಿದ್ದಾರೆ. ಈತನನ್ನು ಸುಪ್ರಸಿದ್ಧ ಶಿವಶರಣ.

# ಉಪವಾಸ–

## ಆರೋಗ್ಯ ರಕ್ಷಣೆಯ ಮಹತ್ವದ ಸಾಧನ

—ಬಿ. ಸುಬ್ರಾಯ ಅಡಿಗ

ಪ್ರಾಚೀನ ಕಾಲದಿಂದಲೇ ಉಪವಾಸ ಭಾರತೀಯ ಸಂಸ್ಕೃತಿಯ ಅಭಿನ್ನ ಅಂಗವೆನಿಸಿತ್ತು. ವಿದೇಶಗಳಲ್ಲೂ ವಿದ್ವಾಂಸರು ಇದರ ಮಹತ್ವವನ್ನರಿತು ಸಾಕಷ್ಟು ಗೌರವನೀಡಿದ್ದಾರೆ. ಯುರೋಪಿನಲ್ಲಿ ಕ್ರಿ.ಪೂ. ೧೫೦೦ರಲ್ಲೇ ಲ್ಯೂಗೀ ಕೊರ್ನಾರೋ ಆಯುಸ್ಸು ಹೆಚ್ಚಿಸಲು ಉಪವಾಸ ಮಾಡಿದ್ದ. ಅರಬ್ ದೇಶದಲ್ಲಿ ಎಬೀಸೀನಾ ಎಂಬ ವೈದ್ಯ ಉಪವಾಸದ ಮೂಲಕವೇ ಚಿಕಿತ್ಸೆ ನಡೆಸುತ್ತಿದ್ದ. ಆಧುನಿಕ ಕಾಲದಲ್ಲಿ ಉಪವಾಸ ಚಿಕಿತ್ಸೆಯ ರೂಪದಲ್ಲಷ್ಟೇ ಅಲ್ಲ–ಧಾರ್ಮಿಕ ಕರ್ತವ್ಯದ ರೂಪದಲ್ಲೂ ಮಾನ್ಯತೆ ಪಡೆದಿದೆ.

ಉಪವಾಸಕ್ಕೆ ಸಂಕ್ಷಿಪ್ತವಾದ ಪರಿಭಾಷೆ ಹೇಳುವುದು ಕಷ್ಟ. ಏಕೆಂದರೆ ಬೇರೆಬೇರೆ ವಿದ್ವಾಂಸರು ಇದನ್ನು ಬೇರೆಬೇರೆ ದೃಷ್ಟಿಕೋನಗಳಿಂದ ನೋಡಿದ್ದಾರೆ. ಈ ಪವಿತ್ರ ಪದ್ಧತಿಯನ್ನು ಬೇರೆಬೇರೆ ಕಾರ್ಯಗಳಿಗಾಗಿ ಬಳಸಿದ್ದಾರೆ. 'ಗಟ್ಟಿ ಮತ್ತು ದ್ರವ—ಎರಡೂ ರೀತಿಯ ಆಹಾರವನ್ನು ಪೂರ್ಣವಾಗಿ ತ್ಯಜಿಸುವುದೇ ಉಪವಾಸ' ಎಂದು ಬರ್ನಾರ್ಡ ಮೆಕಫೆಡನ್ ಹೇಳಿದ್ದಾರೆ. ಚಾರ್ಲ್ಸ್ ಎನನಡೇಲರ ಮೇರೆಗೆ ಆಹಾರದ ಸಾಮಾನ್ಯ ಪ್ರಮಾಣವನ್ನು ನಿಲ್ಲಿಸಿಬಿಡುವುದೇ ಉಪವಾಸ. 'ಯಾವುದೇ ವಿಧದ ಪದಾರ್ಥ ಒಂದಿಷ್ಟು ದೇಹದೊಳಗೆ ಪ್ರವೇಶಿಸದಿರುವುದೇ ಲಂಘನ; ಉಪವಾಸ ಅದರ ಉಪಶಾಖೆ'—ಎಂದಿದ್ದಾನೆ ಚರಕ. ಈ ರೀತಿ ಎಲ್ಲ ವಿಚಾರಕರೂ ಆಹಾರತ್ಯಾಗವಷ್ಟೇ ಉಪವಾಸವೆಂದು ಕರೆದಿದ್ದಾರೆ.

ಮಾನವದೇಹ ಅತಿ ಸೂಕ್ಷ್ಮಕೋಶಗಳಿಂದ ತಯಾರಾದುದೆಂದು ಜೀವವಿಜ್ಞಾನದ ವಿದ್ಯಾರ್ಥಿ ಅರಿತಿದ್ದಾನೆ. ಶ್ರಮದಿಂದಾಗಿ ಈ ಕೋಶಗಳು ತುಂಡಾಗುತ್ತವೆ. ಎಂತಲೇ ವ್ಯಾಯಮದಿಂದ ದಣಿವಾಗುತ್ತಿದೆ ಮತ್ತು ವಿಶ್ರಾಂತಿ, ನಿದ್ರೆ ಇಲ್ಲವೇ ಉಪವಾಸದ ವೇಳೆ ಹೊಸಕೋಶಗಳ ನಿರ್ಮಾಣವಾಗುತ್ತಿದೆ.

ದೇಹದಲ್ಲಿ ಜೀರ್ಣ ಹಾಗೂ ವಿಸರ್ಜನೆ ಎಂಬ ಎರಡು ಕ್ರಿಯೆಗಳು ನಡೆಯುತ್ತಿವೆ. ಜೀರ್ಣಕ್ರಿಯೆಯ ಮೂಲಕ ರಸ ಉಂಟಾಗುತ್ತದೆ. ಅದರಿಂದ ಹೊಸಕೋಶಗಳು ಹುಟ್ಟಿ ದೇಹ ನಿರ್ಮಾಣಗೊಳ್ಳುತ್ತದೆ. ಬೆವರು, ಮಲ ಹಾಗೂ ಮೂತ್ರದ ಮೂಲಕ ತುಂಡಾದ ಕೋಶಗಳು ದೇಹದಿಂದ ಹೊರಹೊರಡುತ್ತವೆ. ಈ ವಿಜಾತಿಯ ವಸ್ತು ದೇಹದಿಂದ ಹೊರಹೊರಡುವುದೇ ಆರೋಗ್ಯಕ್ಕೆ ಹಿತಕರ. ಇಲ್ಲದೆ ಹೋದರೆ ದೇಹದೊಳಗೆ ಸೇರಿದ ವಿಷ, ಅಜೀರ್ಣ, ಅಗ್ನಿಮಾಂದ್ಯ, ಮಲಬದ್ಧತೆ, ಜ್ವರ, ಸಂಧಿವಾತ—ಮೊದಲಾದ ನಾನಾರೀತಿಯ ಕಾಹಿಲೆಗಳಿಗೆ ಕಾರಣವಾಗುತ್ತದೆ. ನಾವು ನಿರಂತರ ತಿನ್ನುತ್ತ ಹೋದರೆ ದೇಹದಲ್ಲಿ ಜೀರ್ಣಾಂಗಗಳು ತಮ್ಮ ಕೆಲಸ ಮಾಡುತ್ತಲೇ ಹೋಗಿ, ದಿನವಿಡೀ ಕೋಶಗಳು ತುಂಡಾಗುತ್ತಿರುತ್ತವೆ. ವಿಸರ್ಜನಾಂಗಗಳು ಅವೆಲ್ಲ ವಿಷವಸ್ತುಗಳನ್ನು ಹೊರಹಾಕಲು ಸಮರ್ಥವಾಗದೆ ಅವು ಒಳಗೇ ಉಳಿದು ನಾವು ಕಾಯಿಲೆ ಬೀಳುತ್ತೇವೆ. ಎಂತಲೇ ಆಗಾಗ್ಗೆ ಊಟಕ್ಕೆ ರಜೆ ಕೊಟ್ಟು ನಾವು ಉಪವಾಸ ಮಾಡಬೇಕು. ಇನ್ನೊಂದು ಮಾತು ಪ್ರಕೃತಿಯ ಸಹಯೋಗನಿಯಮದ ಪ್ರಕಾರ ದೇಹದ ಒಂದಂಗ ರೋಗಿಯಾದರೆ ಉಳಿದ ಅಂಗಗಳೂ ಅವುಗಳ ನೆರವಿಗೆ ಮುಂದಾಗುತ್ತವೆ. ಆದ್ದರಿಂದ ವಿಸರ್ಜನ ಕ್ರಿಯೆಗೆ ತೊಂದರೆಯುಂಟಾದರೆ ಜೀರ್ಣಕ್ರಿಯೆಯೂ ಸರಿಯಾಗಿ ನಡೆಯುವುದಿಲ್ಲ. ಎರಡೂ ಕ್ರಿಯೆಗಳ ನಡುವೆ ಸಮತೋಲನ ಉಳಿಯಬೇಕಾದರೆ ಉಪವಾಸ ಅನಿವಾರ್ಯ. ಈ ರೀತಿ ಉಪವಾಸಕ್ಕೆ ಮೂರು ಮೂಲಭೂತ ಸಿದ್ಧಾಂತಗಳಿವೆ.

೧) ಬಾಹ್ಯಶಕ್ತಿ, ಸಾಧನ ಹಾಗೂ ಔಷಧಿಗಳ ಸಹಾಯವಿಲ್ಲದೆಯೂ ಮನುಷ್ಯ ಶರೀರ ತನ್ನ ಚಿಕಿತ್ಸೆಯನ್ನು ಸ್ವತಃ ಮಾಡಿಕೊಳ್ಳಬಲ್ಲುದು.

೨) ತೀವ್ರರೋಗದಲ್ಲಿ ಆಹಾರ ಸ್ವೀಕರಿಸದಿರುವುದೂ ಜೀರ್ಣಕ್ರಿಯೆಯ ಶ್ರಮದಿಂದ ಕೋಶಗಳು ತುಂಡಾಗದಂತೆ ನೋಡುವುದು ಜಾಣ್ಮೆಯ ಕೆಲಸ.

೩) ಯಾವುದೇ ಅವಯವದಲ್ಲಿ ಕಾಹಿಲೆ ತಲೆದೋರಿದರೂ ಉಳಿದ ಅವಯವಗಳು ಅದಕ್ಕೆ ಸಹಾಯಮಾಡುವಂತೆ ಅವಕಾಶ ಒದಗಿಸಿಕೊಡಬೇಕು.

ರೋಗ ನಿವಾರಣೆ ಹಾಗೂ ಆರೋಗ್ಯ ರಕ್ಷಣೆಗಾಗಿ ಮಾತ್ರ ಉಪವಾಸದ ಅಗತ್ಯ ಇಲ್ಲವೆಂದು ಇತಿಹಾಸ ಹೇಳುತ್ತದೆ. ವೈದಿಕ ಕಾಲದಲ್ಲಿ ವ್ರತಕ್ಕೆ ಮೊದಲು ಹಾಗೂ ಬ್ರಹ್ಮಚರ್ಯಾಶ್ರಮಕ್ಕೆ ಪ್ರವೇಶಿಸುವ ಮುನ್ನ ಸಂಕಲ್ಪ ಹಾಗೂ ಸಂಶಯದಲ್ಲಿ ಧೃಢತೆಯನ್ನುಂಟು ಮಾಡಲು ಉಪವಾಸ ಅಗತ್ಯವೆಂದು ಭಾವಿಸಲಾಗಿತ್ತು. ಸ್ಮೃತಿಗಳಲ್ಲೂ ಪಾಪಗಳ ಪ್ರಾಯಶ್ಚಿತ್ತಕ್ಕಾಗಿ ಉಪವಾಸದ ವಿಧಾನವಿದೆ. ಚರಕ ಹಾಗೂ ವಾಗ್ಭಟ್ಟರು ರೋಗನಿವಾರಣೆಗೂ ಶಸ್ತ್ರಚಿಕಿತ್ಸೆಗೆ ಮೊದಲು ಉಪವಾಸ ಅಗತ್ಯವೆಂದು ಹೇಳಿದ್ದಾರೆ.

ರೋಗಿಯನ್ನು ಹಸಿವಿನಲ್ಲಿಟ್ಟು ರೋಗವೇ ಹಸಿವಿನಿಂದ ಸಾಯುವಂತೆ ನೀವು ಮಾಡಬಲ್ಲಿರಿ'—ಎಂದು ಡಾ. ಡೇವೀ ಮೇಲಿನ ಅಭಿಪ್ರಾಯವನ್ನೇ ಸಮರ್ಥಿಸುತ್ತ ನುಡಿದಿದ್ದಾರೆ.

ಸಾತವಲೇಕರ್ ಭಾರತೀಯ ದೃಷ್ಟಿಕೋಣವನ್ನು ಪ್ರತಿನಿಧಿಸುತ್ತಾ ಹೀಗೆಂದಿದ್ದಾರೆ. "ಹೊಟ್ಟೆಗೆ ವಿಶ್ರಾಂತಿ, ವಿಜಾತೀಯ ದ್ರವ್ಯಗಳನ್ನು ದೇಹದಿಂದ ಹೊರಹಾಕುವಿಕೆ, ವಿಷಯ ವಿಚಾರಗಳ ನಿವೃತ್ತಿ, ನೈತಿಕ ಹಾಗೂ ಆಧ್ಯಾತ್ಮಿಕ ಪ್ರಗತಿ, ನೈಸರ್ಗಿಕ ಬುದ್ಧಿಯ ಉದಯ, ರೋಗ ನಿವಾರಣೆ, ಆತ್ಮವಿಶ್ವಾಸದ ಪ್ರಾಪ್ತಿ, ಪ್ರೇಮದ ವಿಶಾಲತೆಯ ದಿವ್ಯಾನುಭೂತಿ, ವಿರಾಟ್‌ದೊಂದಿಗೆ ಆತ್ಮಸಾಮಂಜಸ್ಯ — ಮೊದಲಾದವುಗಳಿಗಾಗಿ ಇರುವ ಮಹತ್ವಪೂರ್ಣ ಸಾಧನವೇ ಉಪವಾಸ"

ಆಧುನಿಕ ಯುಗದಲ್ಲಿ ಜನರಿಗೆ 'ತಿನ್ನುವ ರೋಗ' ತಗಲಿದೆ. ಹೀಗಾಗಿ ಸಭ್ಯತೆಯೊಂದಿಗೆ ಮಲಬದ್ಧತೆಯೂ ಅವರಿಗೆ ಅಂಟಿಕೊಂಡಿದೆ. ಸಂಯಮ ಅವರ ಹತ್ತಿರವೂ ಸುಳಿಯುವುದಿಲ್ಲ. ದಿನಾಲೂ ಹಲವು ಬಾರಿ ತಿನ್ನುಣ್ಣುವ ಫ್ಯಾಶನ್ ಬಂದಿದೆ. ಅಪ್ರಾಕೃತಿಕ ಹಾಗೂ ಅಬಾದ್ಯ ಆಹಾರವೇ ಮೆಚ್ಚುಗೆ ಪಡೆದಿದೆ. ಜೀರ್ಣಾಂಗಗಳ ಮೇಲೆ ಅತ್ಯಧಿಕ ಶ್ರಮ ಬೀಳುವುದರಿಂದ ಅವು ದುರ್ಬಲಗೊಂಡಿವೆ. ಮಾನಸಿಕ ಶ್ರಮ ಮಾಡದೆ ಸಮತೋಲನ ತಪ್ಪಿ ಹೋಗಿದೆ. ರೋಗಪೀಡಿತ ಮನುಷ್ಯನಿಗೆ ಉಪವಾಸವೊಂದೇ ಉದ್ಧಾರದ ಸಾಧನ.

ಉಪವಾಸಕ್ಕೆ ಇಷ್ಟೊಂದು ಮಹತ್ವವಿದ್ದರೂ ಅದು ಶಾರೀರಿಕ ಶಕ್ತಿ ಹೆಚ್ಚಿಸುವ ಕೆಲಸವಲ್ಲವೆಂಬುದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ಈ ಕೆಳಗೆ ಸೂಚಿಸಿದ ಸ್ಥಿತಿಗಳಲ್ಲಿ ಉಪವಾಸ ಮಾಡಬಾರದು.

೧) ದೈಹಿಕ ಪ್ರಕೃತಿಯನ್ನು ಅರಿಯದೆ ಮನಬಂದಂತೆ ಉಪವಾಸ ಮಾಡುವುದು ಅಪಾಯಕರ.

೨) ಕ್ಷಯ ಮೊದಲಾದ ಘನರೋಗಗಳಲ್ಲಿ ದೇಹದ ಕೋಶಗಳು ವಿಪುಲ ಪರಿಣಾಮದಲ್ಲಿ ನಷ್ಟಹೊಂದುತ್ತವೆ. ಮತ್ತು ಜೀವನ ಶಕ್ತಿ ಹ್ರಾಸವಾಗುತ್ತದೆ. ಅಂತಹ ವೇಳೆ ಉಪವಾಸ ತರವಲ್ಲ.

ಎಷ್ಟೋ ಜನರು ಉಪವಾಸದ ವೇಳೆ ಏನೂ ತಿನ್ನಬಾರದೆಂದು ನಿರ್ಧರಿಸುತ್ತಾರೆ. ಇದರಿಂದ ದೇಹ ದುರ್ಬಲವಾಗಬಹುದೆಂಬ ಭಾವನೆಯಿಂದ ಉಪವಾಸಕ್ಕೆ ಮುನ್ನ ಅಜೀರ್ಣವಾಗುವಷ್ಟು ತಿಂದು ಬಿಡುತ್ತಾರೆ. ಇಂಥ ವಿಚಾರವೇ ಭ್ರಾಮಕ ಹಾಗೂ ಹಾನಿಕರ. ಒಂದೆರಡು ದಿನಗಳ ಉಪವಾಸಕ್ಕೆ ಮೊದಲು ಹೆಚ್ಚಿನ ಎಚ್ಚರಿಕೆ ಬೇಕಿಲ್ಲ. ಆದರೆ ದೀರ್ಘಾವ

ಥಿಯ ಉಪವಾಸ ಮಾಡಬೇಕಿದ್ದರೆ ಉಪವಾಸ ಆರಂಭಿಸುವುದಕ್ಕೆ ೨-೩ ದಿನ ಮೊದಲೇ ಹಣ್ಣಿನ ರಸ ಮಾತ್ರ ಸೇವಿಸತೊಡಗಬೇಕು. ಆಗ ದೇಹದಲ್ಲಿ ಮಲಉಳಿಯುವುದಿಲ್ಲ. ಹೊಟ್ಟೆಗೆ ಸಂಬಂಧಿಸಿದ ಹಳೆಯ ರೋಗಗಳಿಗೆ ದೀರ್ಘಕಾಲದ ಉಪವಾಸ ಅಗತ್ಯ. ಒಂದು ವಾರ ಇಲ್ಲವೇ ೧೦ ದಿನಗಳ ಉಪವಾಸವನ್ನು ಸುಲಭವಾಗಿ ಕೈಗೊಳ್ಳಬಹುದು.

ಉಪವಾಸದ ದಿನಗಳಲ್ಲಿ ರೋಗಿ ಮುಚ್ಚಿದ ಕೋಣೆಯಲ್ಲಿ ಒರಗಿರಬಾರದು. ಎನಿಮಾದಿಂದ ಕರಳುಗಳನ್ನು ನೀರು ಹಾಗೂ ಬಿಸಿಲು ಸ್ನಾನದಿಂದ ಚರ್ಮವನ್ನು ಸ್ವಚ್ಛವಾಗಿಡಬೇಕು. ಆಗ ದೇಹದಲ್ಲಿನ ವಿಜಾತೀಯ ದ್ರವ್ಯ ವಿಸರ್ಜನಾಂಗ ಹಾಗೂ ಚರ್ಮದ ಮೂಲಕ ಹೊರಹೊರಡುವುದು. ಇದಲ್ಲದೆ ಆಹಾರದ ಬದಲು ಶುದ್ಧಗಾಳಿ, ಶುದ್ಧ ನೀರು ಹಾಗೂ ಸೂರ್ಯ ಪ್ರಕಾಶದಿಂದ ದೇಹಕ್ಕೆ ಶಕ್ತಿ ಒದಗಿಸಬೇಕು.

ರೋಗಿಗೆ ನಿಜವಾದ ಹಸಿವೆಯಾದಾಗಲೇ ಉಪವಾಸ ನಿಲ್ಲಿಸಬೇಕು. ಉಪವಾಸದ ಅವಧಿ ಮುಗಿದಾಗ ರೋಗಿ ಉತ್ಸಾಹಭರಿತನಾಗುತ್ತಾನೆ. ಆಗಲೇ ಅವನಿಗೆ ಆಹಾರ ಕೊಡಬೇಕು.

ಉಪವಾಸದ ತರುವಾಯ ಸರಿಯಾದ ಆಹಾರದ ಏರ್ಪಾಡು ಮಾಡುವುದೂ ಅತಿ ಮಹತ್ವದ ಅಂಶ. ಇದರಲ್ಲಿ ಒಂದಿಷ್ಟಾದರೂ ಅಜಾಗರೂಕತೆ ಆಯಿತೆಂದರೆ ರೋಗಿಗೆ ಗಂಡಾಂತರ ಒದಗಬಹುದು. ಮೊದಲ ಮೂರು ದಿನ ರಸ; ಮತ್ತೆ ಮೂರು ದಿನ ಹಾಲು ನೀರು, ಮುಂದೆ ಮೂರುದಿನ ಹಾಲು ಆಮೇಲೆ ಸಾದಾ ಭೋಜನ— ಹೀಗೆ 10 ದಿನಗಳ ಕಾರ್ಯಕ್ರಮ ಹಾಕಿಕೊಳ್ಳಬೇಕು, ದೀರ್ಘಕಾಲದ ಉಪವಾಸಕ್ಕೆ ಈ ಹಂತ ಅಗತ್ಯ.

ಕೆಲವರು ಮೊದಲದಿನ 3-4 ಬಾರಿ ರಸ, ಎರಡನೇ ದಿನ ಹಣ್ಣುಗಳು ಮೂರನೇ ದಿನ ಸಾದಾ ಭೋಜನ ಕೊಡತೊಡಗುತ್ತಾರೆ. ಒಂದೆರಡು ದಿನಗಳ ಉಪವಾಸಕ್ಕೆ ಈ ಕ್ರಮ ಅನುಕೂಲ.

ವಾಸ್ತವಾಗಿ ಆಹಾರಕೊಡುವ ಯಾವಕ್ರಮವನ್ನು ಮೊದಲೇ ನಿಶ್ಚಿತಗೊಳಿಸುವುದು ಸರಿಯಲ್ಲ. ಆಹಾರದ ವಸ್ತು, ಪರಿಮಾಣ ಹಾಗೂ ವೇಳೆ ಉಣ್ಣುವವನ ಆರೋಗ್ಯ ಜೀರ್ಣಶಕ್ತಿಗಳನ್ನು ಅವಲಂಬಿಸಿದೆ. ಮುಖ್ಯವಾಗಿ ಆಹಾರ ವ್ಯಕ್ತಿಗಾಗಿ ಇರಬೇಕೇ ಹೊರತು, ವ್ಯಕ್ತಿ ಆಹಾರಕ್ಕಾಗಿ ಇರಬಾರದು— ಎಂಬುದನ್ನು ಗಮನಿಸಬೇಕು. ಹೆಚ್ಚು ಆಹಾರ ಸೇವಿಸಿ ಸಾಯುವವರ ಸಂಖ್ಯೆಯೇ ಹಸಿವಿನಿಂದ ಸಾಯುವವರಿಗಿಂತ ಎಷ್ಟೋ ಹೆಚ್ಚೆಂದು ಡಾ. ಡೇವೀ ಹೇಳಿದ್ದಾರೆ.

ಅದೇನೇ ಆದರೂ ಉಪವಾಸ ನಮ್ಮ ಜೀವನದಲ್ಲಿ ತುಂಬಾ ಮಹತ್ವದ ಪಾತ್ರ ವಹಿಸುತ್ತಾ ಇದೆ. ಎಷ್ಟೋ ಮಹಾಪುರುಷರೂ ಇದನ್ನು ಸ್ವೀಕರಿಸಿದ್ದಾರೆ. ಎಲ್ಲ ಧರ್ಮಗಳೂ ಇದಕ್ಕೆ ಪ್ರೋತ್ಸಾಹ ಇತ್ತಿವೆ. ಪಶು ಪಕ್ಷಿಗಳೂ ಕಾಹಿಲೆಯ ವೇಳೆ ಉಪವಾಸ ಮಾಡುತ್ತವೆ; ಮತ್ತು ಎಲ್ಲ ಉತ್ತಮ ಚಿಕಿತ್ಸಕರೂ ಇದರ ಗುಣಗಾನಗೈಯುತ್ತಾರೆ. ಉಪವಾಸದ ಜೊತೆಗೆ, ನಮ್ಮ ದಿನನಿತ್ಯದ ಭೋಜನ ಸಾತ್ವಿಕವಾಗಿರುವುದೂ ಅಗತ್ಯ. ಆಗಲೇ ನಮ್ಮ ಆರೋಗ್ಯ ಉತ್ತಮವಾಗಿರುವುದು. —

(ಹಿಂದಿಯಿಂದ)

---

(19 ನೇ ಪುಟದಿಂದ)

ಕೇಳಿದರು. ಹೋಗಲು ಚೆನ್ನಮ್ಮನವರ ಸಮ್ಮತಿಯಿರಲಿಲ್ಲ. ಇದನ್ನು ತಿಳಿದ ಸೋಮನಾಥರು 'ಅಪ್ಪಣೆ ಕೊಟ್ಟರೆ ಕೊರತೆಯಿಲ್ಲ ಕೊಡಿ' ಎಂದು ಕೇಳಿದರು. ಚೆನ್ನಮ್ಮನವರು ನಮಸ್ಕರಿಸಿದರು. ಸೋಮನಾಥರು ಬಂಡಿಯನ್ನು ಹೂಡಿಸಿ ಮೇಲೇರಿ ಕುಳಿತರು. ಆದರೆ ಎತ್ತುಗಳು ಮುಂದಕ್ಕೆ ಹೆಜ್ಜೆಯನ್ನೇ ಇಡಲಿಲ್ಲ. ಸೋಮನಾಥರು ಪ್ರವಾಸವನ್ನು ನಿಲ್ಲಿಸಿ ಕಲ್ಲೆದಲ್ಲಿ ನಿಂತರು. ಕೆಲವು ದಿನಗಳಲ್ಲಿ ಅಲ್ಲಿಯೇ ಲಿಂಗೈಕ್ಯರಾದರು. ಅವರ ಗದ್ದುಗೆ ಕಲ್ಲೆಯದಲ್ಲಿ ಆಯಿತು.

---



# ಈಜಿಪ್ಟಿನ ಮಮ್ಮಿಗಳು

—ಎನ್. ಪಂಕಜ

"ನಿನ್ನ ಋಣವನ್ನು ನಾನೀ ಜನ್ಮದಲ್ಲಿ ತೀರಿಸಲಾರೆ. ನನ್ನ ವಿಶ್ವಾಸದ ಗುರುತಾಗಿ ನಿನಗೊಂದು ಪುಟ್ಟ ಬಹುಮಾನವನ್ನ ಕೊಡೋ ಆಸೆ. ಬೇಡ ಅನ್ನಬೇಡ."

ಹಸ್ತಸಾಮುದ್ರಿಕ ಹೇಳುವವರಲ್ಲೆಲ್ಲ ಖ್ಯಾತಿ ಪಡೆದಿದ್ದ ಶೀರೋವಿಗೆ ಈಜಿಪ್ಟಿನ ಶೇಕ್ ಹೇಳಿದ ಮಾತುಗಳಿವು. ಮಲೇರಿಯಾ ಜ್ವರದಿಂದ ಪಟ್ಟಾಗಿ ಮಲಗಿದ್ದ ಅವನಿಗೆ ಶೀರೋ ಮಾಡಿದ ಆರೈಕೆಯಿಂದ ಗುಣಗೊಂಡು ಸುಪ್ರೀತನಾಗಿದ್ದನು.

ಅವನು ಕೊಟ್ಟ ಬಹುಮಾನ–ಶವದ ಒಂದು ಕರ

"ಬಹಳ ಹಿಂದೆ ಈಜಿಪ್ಟನ್ನು ಆಳುತ್ತಿದ್ದ ದೊರೆಯೊಬ್ಬಳ ಮಗಳ ಕರ"— ಆತ ತಿಳಿಸಿದ— "ಆ ರಾಜ ತನ್ನ ಪೂರ್ವಿಕರ ದೇವರುಗಳನ್ನು ಬದಿಗೊತ್ತಿ, ಸೂರ್ಯದೇವನನ್ನು, ಪೂಜೆ ಮಾಡತೊಡಗಿದ. ಇದರಿಂದ ಈಜಿಪ್ಟಿನ ಪೂಜಾರಿಗೆ ಅಸಮಾಧಾನವಾಯಿತು; ದೇಶದಲ್ಲೆಲ್ಲಾ ಗಲಭೆಯುಂಟಾಯಿತು. ಆದರೂ, ಅವನು ಬಗ್ಗಲಿಲ್ಲ. ಕೊನೆಗೆ ಅವನ ಒಬ್ಬ ಮಗಳೂ ಅವನ ವಿರುದ್ಧ ಎದ್ದು ನಿಂತಾಗ, ಕೋಪ ನೆತ್ತಿಗೇರಿತು. ಅವಳನ್ನು ಚಿತ್ರಹಿಂಸೆಗೆ ಗುರಿಮಾಡಿ ಸಾಯಿಸಿದ. ಅವರ ಪದ್ಧತಿಯಂತೆ 'ಮಮ್ಮಿ' ಮಾಡಿ ಹೂಳುವ ಮುನ್ನ ಅವಳ ಒಂದು ಕರವನ್ನು ಕತ್ತರಿಸಿದ. ಕಾರಣ, ಹಳೆಯ ದೇವರಾದ ಓಸರಿಸ್‌ನ ಪರಮಭಕ್ತೆಯಾದ ಅವಳು ಅಂಗಹೀನೆಯಾಗಿ ಅವನ ರಾಜ್ಯದಲ್ಲಿ ಕಾಲಿಡುವಂತಿರಲಿಲ್ಲ.

ಶೀರೋವಿಗೆ ಈ ತರಹದ ನಿಗೂಢ ವಿಷಯಗಳ ಬಗ್ಗೆ ಬಹಳ ಆಸಕ್ತಿ; ಬಹಳ ಪರಿಸಂಶೋಧನೆ ನಡೆಸುತ್ತಿದ್ದ. ಅಂತಯೇ ಆ ಬಹುಮಾನ ತುಂಬ ಹಿಡಿಸಿತು. ಅದನ್ನು ಭದ್ರವಾಗಿ ಇಟ್ಟುಕೊಂಡು ಇಂಗ್ಲೆಂಡಿಗೆ ಮರಳಿದ.

ಆಶ್ಚರ್ಯ ! ಇದುವರೆಗೂ ಒಣಗಿದ ಕಟ್ಟಿಗೆಯಂತಿದ್ದ ಆ ಕರ ಒಮ್ಮೆಲೆ ಜೀವಂತವಾಯಿತು. ಮಾಂಸ ಖಂಡಗಳು ತೋರತೊಡಗಿದವು; ರಕ್ತನಾಳಗಳು ತುಂಬಿದವು.

"ಇದನ್ನು ಹೀಗೆಯೇ ಇಡಬಾರದು; ಓಸರಿಸ್ ರಾಜ್ಯಕ್ಕೆ ಹೋಗಲಾರದ ಆ ಆತ್ಮ ಏನೇನು ಬಂದು ಮಾಡುವುದೋ—' ಮೊದಲು ಇದನ್ನು ಸುಟ್ಟು ಬಿಡುವುದೇ ಮೇಲು"— ಎಂದುಕೊಂಡವನೇ, ಬೆಂಕಿ ಹತ್ತಿಸಿದನು. ಆ ಕರವನ್ನು ಅದೇ ತಾನೇ ಇಟ್ಟು, ಇನ್ನೂ ಬೈಬಲ್‌ನ ಮೊದಲನೆಯ ಹಾಳೆಯನ್ನು ಓದಿಲ್ಲ ಹರಾತ್ತನೆ, ಮುಚ್ಚಿದ ಮುಂಬಾಗಿಲು ತಾನೇ ತಾನಾಗಿ ತೆರೆದುಕೊಂಡಿತು. ಭರೋ ಎಂದು ಗಾಳಿ ಬೀಸಿತು. ಹೊಸಲಲ್ಲಿ ನಿಂತಿದ್ದಳು ಪುರಾತನ ಈಜಿಪ್ಟಿನ ರಾಜಕುಮಾರಿ !

ಅವಳು ನಿಂತ ಠೀವಿ, ಅವಳ ಆ ದರ್ಪಯುಕ್ತ ರೂಪ, ಆ ಭರ್ಜರಿ ವೇಷಭೂಷಣ, ಇವು ಅವನ ಕಣ್ಣನ್ನು ಕೋರೈಸಿತು. ಮಂತ್ರ ಮುಗ್ದನಾದವನಂತೆ

ದಿಟ್ಟಿಸಿ ನೋಡುತ್ತಾ ಕುಳಿತು ಬಿಟ್ಟ. ಒಳ್ಳೇ ರಾಜ ಮನೆತನದ ಉಡುಪು, ಶಿರದ ಮೇಲೆ ಆ ಮನೆತನದ ಚಿಹ್ನೆ–ಹಾವಿನ ಕಿರೀಟ.

ರೆಪ್ಪೆ ಮುಚ್ಚುವುದರೊಳಗೆ ಅವಳು ಆ ಬೆಂಕಿಯ ಬಳಿ ಇದ್ದಳು ಮರು ನಿಮಿಷವೇ ಮಾಯ ವಾಗಿದ್ದಳು — ಹೇಗೆ ಬಂದಳೋ ಹಾಗೆ !

ಅವಳ ಕೂಡ ಆ ಕರವೂ ಮಾಯವಾಗಿತ್ತು !

ಇಂತಹ ಕುತೂಹಲ ಕೆರಳಿಸುವ ತರ್ಕಕ್ಕೆ ಸಿಗದ ಪ್ರಸಂಗಗಳು ಈಜಿಪ್ಟಿನಲ್ಲಿ ಎಷ್ಟೋ! ಅವರ ಆ ಒಂದೊಂದು ಮಮ್ಮಿ ಪಿರಮಿಡ್ಡಿನ ಬಗೆಯೂ ಒಂದೊಂದು ವಿಚಿತ್ರ ಚರಿತ್ರೆಯನ್ನು ಬರೆಯಬಹುದು.

"ಆಮನ್-ರಾ ದೇವಸ್ಥಾನದಲ್ಲಿ ಪೂಜಾರಿಣಿ ಯಾಗಿದ್ದ ಒರ್ಬ ರಾಜಕುಮಾರಿಯ ಮಮ್ಮಿ ಇದೆ ಇದರಲ್ಲಿ" ಒಬ್ಬ ಸ್ನೇಹಿತ ಶವದಾನಿಯೊಂದನ್ನು ತೋರಿಸುತ್ತಾ ಸಂಶೋಧಕನೊಬ್ಬನಿಗೆ ತಿಳಿಸಿದ "ಈ ಪೆಟ್ಟಿಗೆಯ ಮುಂಭಾಗದಲ್ಲಿ ಆ ರಾಜಕುಮಾರಿಯ ಚಿತ್ರ ಸಹ ಕೊರದಿದೆ."

ಸಂಶೋಧಕನಿಗೆ ಆ ಪೆಟ್ಟಿಗೆಯನ್ನು ಊರಿಗೆ ತೆಗೆದುಕೊಂಡು ಹೋಗಬೇಕೆಂಬ ಆಸೆಯುಂಟಾಯಿತು. ಖಂಡಿತ ಇದನ್ನ ಕೊಳ್ಳಬೇಡಿ ! ಇದನ್ನ ಮುಟ್ಟಿದವರಿಗೆ ಕೆಟ್ಟದಾಗುವಂತೆ ಶಾಪ ಹಾಕಿದ್ದಾರೆ—ಮಮ್ಮಿ ಮಾಡುವ ಮೊದಲು" – ಎಂದು ಹಿತೈಶಿಗಳು ಎಷ್ಟೋ ಹೇಳಿದರೂ, ಕೇಳಲಿಲ್ಲ, ಆ ಪೆಟ್ಟಿಗೆ ಅವನ ಕೈಗೆ ಬಂದದ್ದೇ ತಡ, ದುರಂತಗಳು ಮೇಲೆ ದುರಂತ ಆರಂಭವಾಯಿತು, ಆ ಪೆಟ್ಟಿಗೆಯನ್ನು ಹಡಗಿಗೆ ಕೊಂಡೊಯ್ದ ಸೇವಕರು ಸತ್ತರು, ಇದುವರೆಗೂ ಸುಖವಾಗಿ ಸಾಗುತ್ತಿದ್ದ ಅವನ ಬಾಳಿನ ದಿಕ್ಕೇ ಬದಲಿಸಿತು ! ಇಂಗ್ಲೆಂಡಿಗೆ ಹಿಂತಿರುಗುವ ವೇಳೆಗೆ ಹೆಣವಾಗಿದ್ದ, ಅವನು ದಡದ ಮೇಲೆ ಕಾಲಿಟ್ಟ ತಕ್ಷಣ, ಅವನ ದೃಷ್ಟಿಗೆ ಮೊದಲು ಬಿದ್ದದ್ದು ಈಜಿಪ್ಟಿನಲ್ಲಿ ಅವನು ಕೊಂಡಿದ್ದ ಆ ಪೆಟ್ಟಿಗೆ!

"ಹೀಗೇ ಆಗಬೇಕು ನಿಂಗೆ! ಎಂದು, ಆ ಪೆಟ್ಟಿಗೆಯ ಮೇಲಿದ್ದ ಚಿತ್ರ ಗಹಗಹಿಸಿ ನಕ್ಕಂತಾಯಿತು. ತಕ್ಷಣ ಆ ಪೆಟ್ಟಿಗೆಯನ್ನು ಸ್ಟಾಕ್ ಮಾಡಿದವನೇ, ತನ್ನೊಬ್ಬ ಸ್ನೇಹಿತನಿಗೆ ಬಹುಮಾನವಾಗಿ ಕಳುಹಿಸಿದನು, ಆಕೆಯ ಹೊಸಿಲನ್ನು ಅದು ದಾಟಿದ್ದೇ ತಡ, ಕಷ್ಟಗಳ ಪರಂಪರೆ ಆರಂಭವಾಯಿತು. ಆಕೆಯ ತಾಯಿ ಕಾಲು ಮುರಿದುಕೊಂಡು ಬಹುದಿನ ನರಳಿ ಸತ್ತರು, ನಿಶ್ಚಯ ವಾಗಿದ್ದ ಅವಳ ಮದುವೆ ಅಕಾರಣವಾಗಿ ಮುರಿದುಬಿತ್ತು, ಅವಳೂ ಹೃದಯವೇದನೆಯಿಂದ ಮಲಗಿದಳು.

ತಕ್ಷಣ ಆ ಪೆಟ್ಟಿಗೆಯ ರವಾನೆಯಾಯಿತು — ಮ್ಯೂಸಿಯಮ್‌ಗೆ, ಅಲ್ಲೂ ಅದು ತನ್ನ ಕೈವಾಡವನ್ನು ತೋರಿಸದೆ ಬಿಡಲಿಲ್ಲ. ಫೋಟೋ ತೆಗೆದವ ಸತ್ತು ಹೋದ; ಫೋಟೋದಲ್ಲಿದ್ದ ಅದರ ಕಣ್ಣುಗಳು ನಿರ್ಜೀವ ನೇತ್ರಗಳಾಗಿರದೆ, ದ್ವೇಷ ಕಾರುವ ಜ್ವಾಲಾಮುಖಿಗಳಾಗಿದ್ದವು ! ಮೂಸಿಯಮ್‌ನಲ್ಲಿ ಅದನ್ನು ಸ್ವೀಕರಿಸಿದವರು ಬಂದು ಮುಂಜಾನೆ ಹಾಸಿಗೆಯಲ್ಲಿ ಸತ್ತಿದ್ದರು ! ಮತ್ತು, ಅದು ಮ್ಯೂಸಿಯಮ್ ಒಳಗೆ ಕಾಲಿಟ್ಟ ಮೇಲೆ, ಏನೇನೋ ಗಲಾಟೆ, ಚಿತ್ರ ವಿಚಿತ್ರ ಪ್ರಸಂಗಗಳು ಜರುಗಲಾರಂಬಿಸಿದವಂತೆ! ಕೊನೆಗೆ ಅದನ್ನು ತೆಗೆದು ನೆಲಮಾಳಿಗೆಗೆ ಬಿಸಾಕಿದರು.

ಜನಜನಿತವಾದ ಸುದ್ದಿ ನೆಲಮಾಳಿಗೆಯಲ್ಲೂ ಸುಮ್ಮನಿರದ ಆ ಮಮ್ಮಿಯನ್ನು ತಮ್ಮಲ್ಲಿ ಇಟ್ಟುಕೊಳ್ಳಲು ಬಯಸದೆ ಮ್ಯೂಸಿಯಮ್‌ನವರು ಅದನ್ನು ಅಮೇರಿಕಾದ ಮ್ಯೂಸಿಯಮ್‌ಗೆ ಜಲಮಾರ್ಗವಾಗಿ ಕಳುಹಿಸಿದರಂತೆ. ಅದನ್ನು ಕೊಂಡೊಯ್ದ ಹಡಗು—ನತದೃಷ್ಟ ಟಿಟಾನಿಕ್ !

—

(P. S. **ಟಿಟಾನಿಕ್‌ಗೆ ಜಲಸಮಾಧಿಯಾಯಿತು**)

## ಏನು ಮಾಡಬೇಕು ?

**—ಎಸ್. ಜಿ. ದಯಾಶಂಕರ**

1) ಭೂಲೋಕವ ಶಿವಲೋಕವ ಮಾಡಬೇಕು ಎನ್ನುತಿಹರಿಂದು
ಧರ್ಮದೊಡೆಯರೆ ಜಗಳವಾಡುತಿಹರು ಗುರು–ವಿರಕ್ತರೆಂದು
ಶಿಷ್ಯರು ಯೋಚಿಸುತಿಹರು ಏನು ಮಾಡಬೇಕೆಂದು
ಆ ಭಗವಂತನೇ ಉತ್ತರಿಸಬೇಕು ಇದಕೇನೆಂದು.



# ಗಾನಕೆ ಒಲಿಯದ ಜೀವವೆ ಇಲ್ಲ

**—ಪ. ರಾಮಕೃಷ್ಣ ಶಾಸ್ತ್ರಿ**

ಒಮ್ಮೆ ಲಾಹೋರಿನ ಮೃಗಾಲಯಕ್ಕೆ ಒಂದು ಹೊಸ ಹುಲಿಯನ್ನು ಹಿಡಿದು ತಂದಿದ್ದರು. ಅದು ಭಯಂಕರವಾಗಿ ಆರ್ಭಟಿಸುತ್ತಾ ಗೂಡಿನ ಸರಳುಗಳನ್ನೆ ಜಗಿದು ಹೊರ ಬರಲೆತ್ನಿಸುತ್ತಿತ್ತು. ಮೃಗಾಲಯದೊಳಗೆ ಬರಲು ಯಾರನ್ನೂ ಬಿಡುತ್ತಿರಲಿಲ್ಲ. ಇದು ಸುಪ್ರಸಿದ್ಧ ಸಂಗೀತಕಾರ ಓಂಕಾರನಾಥ ಠಾಕೂರರಿಗೆ ತಿಳಿಯಿತು. ಅವರ ಗಾನಾಮೃತ ಶರಧಿಯಿಂದ ಕಲ್ಲು ಎದೆಯವನೆನಿಸಿದ ಮುಸೋಲಿನಿಯು ಕರಗಿದ್ದ! ಠಾಕೂರರು ತಮ್ಮ 'ಬೇಲಾ' ವನ್ನು ತೆಗೆದುಕೊಂಡು ಮೃಗಾಲಯಕ್ಕೆ ಬಂದರು. ಆಗ ಒಳಗೆ ಹೋಗದಂತೆ ತಡೆದ ದ್ವಾರಪಾಲಕನಿಗೆ ಲಂಚ ಕೊಟ್ಟು ಬಾಯಿ ಮುಚ್ಚಿಸಿದರು.

ಓಂಕಾರನಾಥರು ಹುಲಿಯ ಪಂಜರದೆದುರು ನಿಂತು, ಬೇಲಾ ನುಡಿಸುತ್ತಾ 'ಕಾಪಿ' ರಾಗದ ಕೀರ್ತನೆಯೊಂದನ್ನು ಹಾಡತೊಡಗಿದರು. ಹಾಡುತ್ತಿದ್ದಂತೆ ಹುಲಿ ಗರ್ಜನೆ ನಿಲ್ಲಿಸಿತು. ಕ್ರಮಶಃ ಅದರ ಗುರುಗುಟ್ಟುವಿಕೆಯೂ ನಿಂತಿತು. ಕೊನೆಗೆ ಅದು ಪಂಜರದ ಸರಳುಗಳಲ್ಲಿ ಕೈಯಿಟ್ಟು ಕಣ್ಣೀರಿಳಿಸುತ್ತಾ ನಿಂತುಕೊಂಡಿತು. ಹೀಗೆ ಹುಲಿಯನ್ನು ಒಲಿಸಿದ ಓಂಕಾರನಾಥಜಿ ಹೆಮ್ಮೆಯಿಂದ, "ಬೇಲಾದ ಬದಲು ಸಾರಂಗಿ ತರುತ್ತಿದ್ದರೆ ಈ ಹುಲಿಯೊಂದಿಗೆ ಆಟವಾಡುತ್ತಿದ್ದೆ !" ಎಂದರು.

ಸಂಗೀತಕ್ಕೆ ಹಾವೂ ಮರುಳಾಗುತ್ತದೆ, ಅಂಥರಾದ ಗವಯಿಗಳೊಬ್ಬರು ಪುನ್ನಾಗ ಸ್ವರದ ಕೀರ್ತನೆ ನುಡಿಸುತ್ತಿದ್ದಾಗ ಹಾವೊಂದು ಒಳಗೆ ಬಂದು ತಲೆ ದೂಗುತ್ತಾ ಇತ್ತು. ಕುರುಡರಾದ ಅವರು ಹಾವಿನ ಇರವನ್ನು ತಿಳಿಯದೆ ಕೀರ್ತನೆಯನ್ನು ನಿಲ್ಲಿಸಿದ ಕೂಡಲೇ ಕೆರಳಿದ ಹಾವು ಅವರನ್ನು ತಟಕ್ಕನೆ ಕಡಿಯಿತಂತೆ.

ಸಂಸ್ಕೃತ ಸುಭಾಷಿತವೊಂದು 'ಶಿಶುರ್ವೇತ್ತಿ ಪಶುರ್ವೇತ್ತಿ ವೇತ್ತಿ ಗಾನರಸಂ ಫಣೀ' (ಗಾನರಸದ ಸವಿ ಮಗುವಿಗೂ ತಿಳಿದಿದೆ, ಹಸುವಿಗೂ ಗೊತ್ತಿದೆ, ಹಾವಿಗೂ ಅರಿತಿದೆ) ಎಂದು ಹೇಳಿರುವ ಮಾತನ್ನು ಅಕ್ಷರಶಃ ಒಪ್ಪಬಹುದಲ್ಲದೆ ಸಂಗೀತದ ಆಕರ್ಷಕತೆ ಬಹೂಪಯೋಗಿಯೂ ಆಗಬಲ್ಲದು. ಇವಷ್ಟೇ ಅಲ್ಲ, ಸಸ್ಯಗಳೂ ಸಂಗೀತವನ್ನು ಮೆಚ್ಚಬಲ್ಲುವೆಂಬ ಅಂಶ ಆಶ್ಚರ್ಯಜನಕವಾದುದು.

ಭಾರತೀಯ ಸಂಗೀತದ ಪರಂಪರೆಗೆ ರೋಗ ನಿವಾರಕ ಶಕ್ತಿಯಿದೆಯೆಂಬುದನ್ನು ವೈಜ್ಞಾನಿಕ ಪ್ರಯೋಗಗಳು ಸಿದ್ಧಪಡಿಸಿವೆ. ಅದರಲ್ಲೂ ಮನೋರೋಗ ಚಿಕಿತ್ಸೆಗಳಲ್ಲಿ ಅದು ಸಂಜೀವಿನಿ. ಮೆದುಳಿನಲ್ಲಿರುವ 'ಥಲಾಮಸ್' ಎಂಬ ಅಂಗವೇ ನಮ್ಮ ಎಲ್ಲಾ ಭಾವನೆ, ಉದ್ರೇಕ, ಸಂವೇದನೆಗಳ ಉಗಮಸ್ಥಳ. ಮನೋವ್ಯಾಪಾರಗಳ ಹಿಡಿತವಿರುವುದೂ ಅದರ ಕೈಯಲ್ಲೇ. ಅಲ್ಲಿ ನೆಲಸಿದ ಭೀತಿ, ಉದ್ರೇಕ, ನಿರಾಶೆ, ನಿರ್ವಿಣ್ಣತೆಗಳನ್ನೆಲ್ಲ ಚೊಕ್ಕಟ ಮಾಡಿ ನಿರ್ಮೂಲನಗೊಳಿಸುವ ಶಕ್ತಿ ಸಂಗೀತದ ಮಧುರ ತರಂಗಕ್ಕಿವೆ. ಅಮೆರಿಕದ ಕೊನೆಕ್ಟಿಕಟ್ ಸರಕಾರಿ ಆಸ್ಪತ್ರೆಯಲ್ಲಿ ಸಂಗೀತದಿಂದ ಅನೇಕ ಮನೋರೋಗಿಗಳ ವಿಚಿತ್ರ ವರ್ತನೆ ಶಾಂತಿರೂಪಕ್ಕೆ ಬದಲಾಯಿತು. ರಾಲ್ಫ್ ಲಾರೆನ್ಸ್ ಹಾಂಟ್ ಸುಪ್ರಸಿದ್ಧ ವಾಯ್‌ಲಿನ್ ವಾದಕ. ಅವನ ಹೆಂಡತಿ ಗ್ರೇಷನ್ ಪಿಯಾನೋ ನಿಪುಣೆ. ಈ ದಂಪತಿಗಳು ಶಾಸ್ತ್ರೀಯ ಮತ್ತು ಸುಗಮ ಸಂಗೀತದ ಟೇಪುರೆಕಾರ್ಡುಗಳನ್ನು ತಯಾರಿಸಿ ಪಿಟ್ಸ್‌ಬರ್ಗಿನ ಆಸ್ಪತ್ರೆಗಳಿಗೆ ಪೂರಯಿಸುತ್ತಾರೆ. ಇವುಗಳ ಶ್ರವಣದಿಂದ ದೀರ್ಘ ಕಾಲದಿಂದ ನರಳುತ್ತಿರುವ ರೋಗಿಗಳೂ ಗಾಯಾಳುಗಳೂ ಚೇತರಿಸಿಕೊಳ್ಳಲಾರಂಭಿಸಿದರು. ರೋಗಿಗಳ ಬಯಕೆಗನುಸರಿಸಿ ಚಿತ್ರಗೀತೆ, ಜನಪದ ಗೀತೆ ಇತ್ಯಾದಿ ವಿವಿಧ

ಪ್ರಕಾರಗಳ ಸಂಗೀತ ಒದಗಿಸುತ್ತಾರೆ. ಇದನ್ನು ಕೇಳಿ ಲಕ್ವಾ ಹೊಡೆದವರೂ ಗುಣಮುಖರಾಗಿದ್ದಾರೆ, ವೃದ್ಧಾಪ್ಯದಿಂದ ನಿಶ್ಚೇತನಗೊಂಡವರೂ ಚುರುಕಾಗಿದ್ದಾರೆ.

ಸಂಗೀತ ಉದ್ವೇಗಗೊಂಡವರ ಮನಸ್ಸನ್ನು ತಣಿಸಬಲ್ಲದು. ಹಿಂದೆ ಜರ್ಮನಿ, ಇಟಲಿ, ರಷ್ಯ ಮೊದಲಾದ ಸರ್ವಾಧಿಕಾರಿ ದೇಶಗಳಲ್ಲಿ ಸಂಗೀತದ ಬಳಕೆಯಿಂದ ರಣಹೇಡಿಗಳಲ್ಲೂ ಯುದ್ಧೋತ್ಸಾಹವನ್ನು ತುಂಬಲಾಯಿತು. ಜೋಗುಳ ಕೇಳಿದರೆ ಎಳೆಯ ಮಗು ಅದನ್ನಾಲಿಸುತ್ತಾ ಹೇಗೆ ನಿದ್ರಿಸುವುದೋ ಹಾಗೆಯೇ ಯೋಗ್ಯ ಸಂಗೀತವು ದುರ್ನಡತೆಯ ಮಕ್ಕಳನ್ನು ತಿದ್ದಬಹುದೆಂದು ಗೊತ್ತಾಗಿದೆ. ಇಟಲಿಯ ಹೆಸರಾಂತ ಸರ್ಜನ್ ಪ್ರೊ॥ ಗೆಟಾನೋ ಝೂಪಲಾರು ಸಂಗೀತವನ್ನು ಸದುಪಯೋಗಪಡಿಸಿಕೊಂಡ ಕ್ರಮ ವಿಸ್ಮಯ ಜನಕ. ಹಿತಕರ ರಾಗ ಸಂಯೋಜನೆಯ ವಾತಾವರಣದಲ್ಲಿ ಅವರು ಅನೇಕ ರೋಗಿಗಳಿಗೆ ಸ್ಮೃತಿ ತಪ್ಪಿಸದೆಯೇ ಅವರನ್ನು ಸಂಗೀತದ ಸಮ್ಮೋಹನೆಗೆ ಒಳಪಡಿಸಿ ಯಶಸ್ವಿ ಶಸ್ತ್ರಕ್ರಿಯೆ ನಡೆಸಿದರು. ಸಹಸ್ರಾರು ರೋಗಿಗಳಿಗೆ ಶಸ್ತ್ರಕ್ರಿಯೆ ಆವಶ್ಯವಿದ್ದರೂ ಇಂತಹ ಸಮ್ಮೋಹಕ ಶಕ್ತಿಯ ರಾಗಗಳನ್ನು ದಿನವೂ ನಿಯಮಿತವಾಗಿ ಕೇಳಬೇಕೆಂದು ವಿಧಿಸಿದುದರಿಂದ ಅವರ ಜಾಡ್ಯಗಳು ಹೇಳಹೆಸರಿಲ್ಲದೆ ಓಡಿಹೋದ ಪ್ರಸಂಗಗಳೂ ಡಾ॥ ಝೂಪಲಾರ ಲಕ್ಷ್ಯಕ್ಕೆ ಬಂದಿವೆ.

ಸಂಗೀತವೆಂದರೆ ಕೇವಲ ಸದ್ದಲ್ಲ, ಅದಕ್ಕೆ ಭಾವಪ್ರಚೋದಕ ಶಕ್ತಿಯಿವೆಯೆಂದು ಅಮೆರಿಕದ ಸಂಗೀತ ಪರಿಷತ್ತಿನ ಅಭಿಮತ. ಪಿಟೀಲು ಮುಂತಾದ ತಂತೀವಾದ್ಯಗಳ ನಾದದಿಂದ ಮಾನವನ ಜೀವಕಣಗಳು ಅಧಿಕಗೊಳ್ಳುತ್ತವೆ. ತಲೆಗೂದಲಿನ ಬೆಳವಣಿಗೆಯೂ ಶೀಘ್ರಗೊಳ್ಳುತ್ತದೆಂದು ಅಲ್ಲಿ ಸಿದ್ಧಪಡಿಸಿದ್ದಾರೆ. ಅಮೆರಿಕದ ವಿಶ್ವವಿದ್ಯಾನಿಲಯವೊಂದರ ಕ್ರೀಡಾವಿಭಾಗವು ಒಂದು ಆಟದಲ್ಲಿ ಸೋಲಲಿದ್ದ ಆಟಗಾರರು ನಡುವೆ ನೀಡಿದ ಸಂಗೀತಾಮೃತ ಪಾನದಿಂದ ಮತ್ತೆ ಉತ್ಸಾಹಿತರಾಗಿ ಆಡಿ, ಗೆಲುವು ಪಡೆದ ಪ್ರಸಂಗವನ್ನು ಉದಾಹರಿಸುತ್ತದೆ. ಮನ್‌ಹಟನ್ ಹುಚ್ಚಾಸ್ಪತ್ರೆಯ ನಿರಾಶಾದಾಯಕ ಸ್ಥಿತಿಗಳ ರೋಗಿಗಳೂ ಮರಳಿ ಮನುಷ್ಯರಾಗಿದ್ದಾರೆ. ಸಂಗೀತದ ಶಕ್ತಿ ಅಗಾಧವೆಂಬುದಕ್ಕೆ ಉದಾಹರಣೆ ಅನೇಕ.

ಸಂಗೀತ ಕೇಳಿ ತಮ್ಮ ಮನೆಯ ಹಸು ಹೆಚ್ಚು ಹಾಲು ಕೊಟ್ಟಿತೆಂದು ಶ್ರೀ ಬಸವರಾಜ ರಾಜಗುರು ಅವರು ಒಂದೆಡೆ ಹೇಳಿದ್ದಾರೆ. ಕಿವಿಗಿಂಪಾದ ಹಾಗೂ ಶಾಂತವಾದ ಸಂಗೀತದಿಂದ ದನಗಳ ಹಾಲಿನಲ್ಲಿ ಶೇ. ೧೦ ಹೆಚ್ಚಳ ಕಂಡು ಬಂದುದಾಗಿ ನ್ಯೂಯಾರ್ಕಿನ ಡೈರಿಯೊಂದು ತಿಳಿಸಿದೆ. ಬ್ರಿಟನ್ನಿನ ಎಪ್ಸಂನಲ್ಲಿ ಒಂದು ಹೆಣ್ಣು ಕುದುರೆ ಖಾಯಿಲೆ ಬಿದ್ದು ಹುಲ್ಲು ನೀರು ತ್ಯಜಿಸಿತು. ಯಾವ ಔಷಧಿಯಿಂದಲೂ ಅದಕ್ಕೆ ಗುಣವಾಗಲಿಲ್ಲ. ಆಗ ಅದರ ಒಡೆಯ ಆದರೆ ಮರು ಗ್ರಾಮಾಫೋನು ತಂದಿಟ್ಟು ಸಂಗೀತದ ರೆಕಾರ್ಡು ಹಚ್ಚಿದ. ಕುದುರೆ ಕತ್ತೆತ್ತಿ ಅದನ್ನಾಲಿಸಿತು. ನಿಧಾನವಾಗಿ ಆಹಾರ ತಿನ್ನತೊಡಗಿ, ಚುರುಕಾಯಿತು. ೨೫೦೦ ವರ್ಷಗಳ ಹಿಂದೆಯೇ ಇಟಲಿಯಲ್ಲಿ ಕ್ರೋಟೋನ್ ನಗರದ ಯುದ್ಧಾಶ್ವಗಳಿಗೆ ಸಂಗೀತಕ್ಕೆ ತಕ್ಕಂತೆ ನರ್ತಿಸಲು ತರಬೇತಿಯಿತ್ತಿದ್ದರು. ಸೈಬಿರೈಟಿಸ್ ಎಂಬುವನು ಇಟಲಿಯ ಮೇಲೆ ಆಕ್ರಮಣ ಮಾಡಿದಾಗ' ಕೊಂಬು ಕಹಳೆಗಳನ್ನೂದಿ ಇಟಲಿಯ ಸೈನಿಕರು ಏರಿದ್ದ ಕುದುರೆಗಳನ್ನು ಸಿಕ್ಕಾಪಟ್ಟೆ ಓಡಿಸಿ ಬಿಡುತ್ತಿದ್ದರು. ಇದರಿಂದ ಇಟಲಿಯ ನಗರಗಳೆಲ್ಲಾ ಅವರ ಕೈವಶವಾದರೂ ಕ್ರೊಟೊನಿನ ಕುದುರೆಗಳೆದುರು ಅವರ ಈ ಆಟ ನಡೆಯದೆ ಪರಾಜಿತರಾದರು.

ಪ್ರಾಣಿಗಳೂ ಸಂಗೀತದಿಂದ ಆಕರ್ಷಿತವಾಗುತ್ತವೆ· ಅದರಿಂದ ಕ್ರೂರ ಮೃಗಗಳನ್ನು ಪಳಗಿಸಬಹುದಂತೆ. ಮೃಗಾಲಯಗಳಲ್ಲಿ ಮೊಸಳೆಗಳು ಗಂಡು–ಹೆಣ್ಣು ಸಂಧಿಸಬೇಕಾದ ಋತು ಕಾಲದಲ್ಲಿ ಅವು ಔದಾಸಿನ್ಯ ಪ್ರಭಾವದೀದ್ದರೆ ತುತ್ತೂರು ಊದುವುದರಿಂದ ಅವುಗಳ ಮನಸ್ಸನ್ನು ಕೆರಳಿಸಿ ಗಂಡು ಹೆಣ್ಣನ್ನು ಸೇರಿಸಬಹುದೆಂದು ಗೊತ್ತಾಗಿದೆ. ಒರಟು ಸಂಗೀತ ಪ್ರಾಣಿಗಳಿಗೂ ಅಸಹನೀಯವಾಗುತ್ತದೆ. ಪಾಶ್ಚಿಮಾತ್ಯ 'ಜಾಜ್' ಸಂಗೀತ ಕೇಳಿದರೆ ಎಲ್ಲಾ ಪ್ರಾಣಿಗಳು ಕೆರಳುತ್ತವೆ, ಉದ್ವಿಗ್ನತೆಗೊಳ್ಳುತ್ತವೆ. ಉತ್ತರ ಧೃವದಲ್ಲಿರುವ ಪೆಂಗ್ವಿನ್ ಹಕ್ಕಿಗಳಿಗೂ ಮೃದು ಮಧುರತೆಯ ಮಂದ ಸ್ವರದ ಸಂಗೀತ ಪ್ರಿಯ. ಕ್ರಿಮಿಕೀಟಗಳೂ ಸಂಗೀತದ ಬಗ್ಗೆ ಒಳ್ಳೆಯ ಪ್ರತಿಕ್ರಿಯೆ ತೋರುತ್ತದೆ. ಲಂಡನ್ನಿನ ಮೃಗಾಲಯವೊಂದರಲ್ಲಿ ಪಿಟೀಲು ಬಾರಿಸತೊಡಗಿದಾಗ ಅತ್ತಿತ್ತ ಓಡಾಡುತ್ತಿದ್ದ



ಜೇಡಗಳು ಚೇಳುಗಳು ಸ್ತಬ್ಧವಾಗಿ ನಿಂತು, ಸಂಗೀತವನ್ನು ಆಲಿಸತೊಡಗಿದುವಂತೆ. ಅಮೇರಿಕದಲ್ಲಿ ಒಂದು ಹಬ್ಬದ ಸಂದರ್ಭ ಸಂಗೀತಾಭ್ಯಾಸ ನಡೆದಿದ್ದಾಗ ಕಪ್ಪೆಗಳ ಸಮೂಹವೇ ಬಂದು ಆ ಸಂಗೀತಕ್ಕೆ ಧ್ವನಿ ಸೇರಿಸಿತಂತೆ. ಮನಸ್ಸಿಗೊಪ್ಪಿದ ಸಂಗೀತ ಆಲಿಸುತ್ತಿದ್ದರೆ ಪ್ರಾಣಿಗಳ ನಾಡಿಯೂ ಮಂದವಾದ ಗತಿಯುಳ್ಳಿರುತ್ತದೆನ್ನುತ್ತಾರೆ ಜೀವವಿಜ್ಞಾನಿಗಳು.

ಅಣ್ಣಾಮಲೆ ವಿಶ್ವವಿದ್ಯಾನಿಲಯದಲ್ಲಿ ನಡೆದ ಪ್ರಯೋಗಗಳಿಂದ ಸಂಗೀತವು ಸಸ್ಯದ ಮೇಲೂ ವಿಸ್ಮಯಕರ ಪ್ರಭಾವ ಬೀರುವುದಂದು ಗೊತ್ತಾಗಿದೆ. ಅದಕ್ಕಾಗಿ ನಾಚಿಕೆ ಮುಳ್ಳು, ಟೆಲಿಗ್ರಾಫ್ ಸಸಿ, ತುಳಸಿ, ಹೈಡ್ರಿಲಾ ಎಂಬ ಜಲಸಸ್ಯವನ್ನೂ, ಹೊಗೆಸೊಪ್ಪು, ಮತ್ತು ಬತ್ತದ ಗಿಡಗಳನ್ನೂ, ಪೆಟುನಿಯ, ಕಾಸ್ಮಾಸ್ ಮೊದಲಾದ ಕ್ರೋಟನ್ ಗಿಡಗಗಳನ್ನೂ ಪ್ರಯೋಗಕ್ಕೆ ಆರಿಸಲಾಯಿತು. ದಿನವೂ ಅವುಗಳೆದುರು ಬೆಳಿಗ್ಗೆ ಇಲ್ಲವೇ ಸಂಜೆಯ ೬ ರಿಂದ ೮ ಗಂಟೆಗಳ ನಡುವೆ ಅರ್ಧ ತಾಸಿನ ಕಾಲ ಕೊಳಲು ಅಥವಾ ನಾಗಸ್ವರ, ಪಿಟೀಲು ಯಾ ವೀಣೆ ಇದಲ್ಲದೆ ಹಾರ್ಮೋನಿಯಂ ಇವುಗಳ ಸಂಗೀತ ಸುಧೆಯನ್ನು ಉಣಿಸತೊಡಗಿದರು. ಸಂಗೀತ ಸುಧೆ ಉಣ್ಣದ ಗಿಡಗಳಿಗಿಂತ ಉಂಡ ಗಿಡಳು ಹೆಚ್ಚು ಸೊಕ್ಕಿ, ಅಚ್ಚ ಹಸಿರಾದ ಎಲೆಗಳನ್ನು ಹೊಂದಿ, ಬೇಗ ಹೂ ಬಿಡುತ್ತಿರುವುದು ವೇದ್ಯವಾಯಿತು. ಅವುಗಳಮೇಲೆ ಮನುಷ್ಯರ ಕಂಠ ಸ್ವರದ ಪರಿಣಾಮವನ್ನು ಪರೀಕ್ಷಿಸಿದಾಗ ಗಂಡಸರ ಧ್ವನಿಯಿಂದ ಅವು ಯಾವ ಪ್ರತಿಕ್ರಿಯೆಯನ್ನು ತೋರಲಿಲ್ಲ. ಆದರೆ ಸ್ತ್ರೀಯರ ಕಂಠಸ್ವರದಿಂದ ಉತ್ತೇಜಿತವಾದುವು. ದಿನವೂ ಚಾರುಕೇಶಿ ರಾಗದ ಒಂದು ಹಾಡಿನ ರೆಕಾರ್ಡನ್ನು ಬತ್ತದ ಗದ್ದೆಯೊಂದರ ಬಳಿ ೬೦ ದಿನಗಳ ಕಾಲ ಹಾಕಿಟ್ಟ ಪರಿಣಾಮವಾಗಿ ಮಾಮೂಲಿ ಬೆಳೆಗಿಂತ ಶೇ. ೨೦ ರಷ್ಟು ಜಾಸ್ತಿ ಫಸಲು ಬಂದಿರುವುದು ಗೊತ್ತಾಯಿತು. ಇದೇ ರೀತಿ ಬೀಜಗಳು ಮೊಳಕೆಯೊಡೆದುವು.

ಸಂಗೀತ ತರಂಗಗಳು ಸಸ್ಯಗಳ ಆಹಾರೋತ್ಪಾದನಾ ಶಕ್ತಿಯನ್ನು ಅಧಿಕಗೊಳಿಸಬಲ್ಲುವು. ನಾದದಿಂದ ಉತ್ತೇಜಿತಗೊಂಡಂತೆ ಅವು ಹೊರಡಿಸುವ ಆಮ್ಲಜನಕದ ಪ್ರಮಾಣ ಶೇ ೬೦ ರವರೆಗೂ ಇರುವುದನ್ನು ನೋಡಿ ಹೀಗೆ ನಿರ್ಧರಿಸಿದ್ದಾರೆ. ಸಸ್ಯಗಳು ಹೆಚ್ಚು ಎತ್ತರ ಬೆಳೆಯಲು ಸಂಗೀತ ಸಹಕಾರಿ.

ಸಂಗೀತದಿಂದ ಮಳೆ ತರಿಸುವ ಶಕ್ತಿ ಅನೇಕ ಮಹಾತ್ಮರಿಗಿತ್ತಂತೆ. ಹನುಮಂತ ಹಾಡಿದಾಗ ಕಲ್ಲು ಕರಗಿತಂತೆ. ದೇವರನ್ನೊಲಿಸುವ ದಿವ್ಯ ಸಾಧನ ಸಂಗೀತ. ಸಂಗೀತದ ಶಕ್ತಿಯಿಂದ ಪ್ರಕೃತಿಯನ್ನೇ ಬದಲಿಸಿ ಬಿಡುವ ಕಾಲ ಬಂದೀತೇನೋ! ದೀಪಕ್ ರಾಗದಲ್ಲಿ ಹಾಡಿದರೆ ದೀಪಗಳು ತಂತಾನೇ ಉರಿಯುತ್ತವೆಂದೂ ಸಂಗೀತದ ಅದ್ಭುತ ಸಾಮರ್ಥ್ಯದ ಬಗೆಗೆ ಹಿರಿಮೆಗಳು ಪ್ರಚಲಿತವಾಗಿವೆ. —

# ಜನ ಸಂಖ್ಯಾ ಸ್ಫೋಟ

—ಡಿ ವೆಂಕಟರಾವ್, ಎಂ. ಎ.

ಇಂದಿನ ವಿಶ್ವದಲ್ಲಿ ಪ್ರತಿಯೊಂದು ದೇಶವೂ ತನ್ನದೇ ಆದ ಸಮಸ್ಯೆಗಳನ್ನು ಎದುರಿಸುತ್ತದೆ. ಈ ಸಮಸ್ಯೆ ಎನ್ನುವುದು ಮಾನವ ಹುಟ್ಟಿನಿಂದಲೇ ಪ್ರಾರಂಭವಾಗಿದೆ ಎನ್ನಬಹುದು. ಇತಿಹಾಸದ ಪುಟಗಳನ್ನು ತಿರುವಿನೋಡಿದಾಗ ಇಡೀ ಮಾನವ ಜನಾಂಗ ಒಂದಲ್ಲ ಒಂದು ಸಮಸ್ಯೆಯಿಂದ ಸುತ್ತುವರಿದಿರುವುದನ್ನು ಕಾಣಬಹುದು. ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ಅಣು ಸ್ಫೋಟನಾ ಪರಿಣಾಮಗಳು ಕಲುಷಿತವಾತಾವರಣಗಳು ಸಮಸ್ಯೆಯಾದರೆ ಭಾರತದಂತಹ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಆಹಾರ, ವಸತಿ, ಬೆಲೆಗಳ ಏರಿಕೆ, ನಿರುದ್ಯೋಗಗಳು ಪ್ರಮುಖ ಸಮಸ್ಯೆಗಳಾಗಿವೆ. ಈ ಎಲ್ಲಾ ಸಮಸ್ಯೆಗಳಿಗೂ ಮೂಲಕಾರಣವಾಗಿ, ಇಡೀ ವಿಶ್ವದ ಗಮನವನ್ನು ಸೆಳೆದು, ಬೃಹದಾಕಾರವಾಗಿ ನಿಂತಿರುವ ಜನಸಂಖ್ಯಾ ಸಮಸ್ಯೆಯು ಇಂದು ಭಾರತದ ಪಾಲಿಗೆ ಪೆಡಂಭೂತವಾಗಿ ಪರಿಣಮಿಸಿದೆ. ಅಭಿವೃದ್ಧಿಯ ಫಲಗಳನ್ನೆಲ್ಲಾ ಕಬಳಿಸಿ, ಬಳ್ಳಿಯಂತೆ ಕಾಲಿಗೆ ತೊಡರಿಕೊಳ್ಳುತ್ತಿರುವ ಈ ವಿಷಮ ಸಮಸ್ಯೆ ಭಾರತದ ಪಾಲಿಗೆ ಶತ್ರುವಾಗಿದೆ. ಜನಸಂಖ್ಯಾ ಸ್ಫೋಟ ನಮ್ಮ ಆರ್ಥಿಕಾಭಿವೃದ್ಧಿಯ ವೇಗವನ್ನು ಮಂದಗೊಳಿಸಿದೆ. ಯಾವ ಸಮಸ್ಯೆಯನ್ನೇ ಆಗಲಿ, ಬೆಳೆಯಗೊಟ್ಟಷ್ಟೂ ಅದು ದೇಶದ ಹಿತಕ್ಕೆ ಆತಂಕಕಾರಿ. ಅದರಲ್ಲೂ ಜನಸಂಖ್ಯಾ ಸಮಸ್ಯೆಯಂತಹ ರಾಷ್ಟ್ರೀಯ ಸಮಸ್ಯೆಯನ್ನು ಅಪೇಕ್ಷಣೀಯ ಮಿತಿಗೆ ಮಾತ್ರ ಒಳಪಡಿಸುವುದು ತೀರಾ ಅಗತ್ಯ.

ಜನಸಂಖ್ಯೆಗೂ ದೇಶದ ಆರ್ಥಿಕಾಭಿವೃದ್ಧಿಗೂ ನಡುವೆ ಅತಿ ನಿಕಟವಾದ ಸಂಬಂಧ ಬೆಸೆದುಕೊಂಡಿದೆ ಎಂಬುದನ್ನು ಕೌಟಿಲ್ಯನಿಂದ ಹಿಡಿದು ಆಧುನಿಕ ಅರ್ಥಶಾಸ್ತ್ರಜ್ಞರವರೆಗೂ ಒಮ್ಮತದಿಂದ ಒಪ್ಪಿಕೊಂಡಿದ್ದಾರೆ. ಇವರೆಲ್ಲರ ಪ್ರಕಾರ ದೇಶದ ಅರ್ಥಿಕಾಭಿವೃದ್ಧಿಯ ರಂಗಮಂಟಪದಲ್ಲಿ ಮಾನವ ಶಕ್ತಿಯ ಪಾತ್ರ ಅತಿ ಹಿರಿದು. ದೇಶದ ಉತ್ಪಾದನಾ ಶಕ್ತಿಯು ಮಾನವ ಶಕ್ತಿಯ ಗುಣಮಟ್ಟ ಹಾಗೂ ಪರಿಣಾಮವನ್ನು ಅವಲಂಬಿಸಿರುತ್ತದೆ. ಉತ್ಪಾದನೆಯಿಂದ ಸಂತೃಪ್ತಿ ಪಡೆಯಲು ಜನಸಂಖ್ಯೆ ಅತ್ಯಾವಶ್ಯಕ. ಜನರೇ ಇಲ್ಲದೆ ಕೇವಲ ವಸ್ತುಗಳ ಉತ್ಪಾದನೆಯಾದರೆ ಅದಕ್ಕೆ ಅರ್ಥವಿಲ್ಲ. ಉತ್ಪಾದಿಸುವ ಜನರೇ ಉತ್ಪಾದನೆಯನ್ನು ಉಪಭೋಗಿಸಿ ಸಂತೃಪ್ತಿಹೊಂದಿ ಅಧಿಕ ವಸ್ತುಗಳನ್ನು ಪುನಃ ಉತ್ಪಾದಿಸಬೇಕು. ಇದು ಜಗತ್ತಿನ ನಿರಂತರ ನಿಯಮ. ಆಗಲೇ ದೇಶದ ಆರ್ಥಿಕಾಭಿವೃದ್ಧಿಗೆ ಚೇತನ. ಆರ್ಥಿಕಾಭಿವೃದ್ಧಿ ದೇಶದ ಒಲವಿನ ಸೋಪಾನ. ಜನಸಂಖ್ಯಾ ಬೆಳವಣಿಗೆ ಆರ್ಥಿಕಾಭಿವೃದ್ಧಿಗೆ ಪೂರಕವೂ ಆಗಬಲ್ಲದು. ಭಾರತದ ಮಟ್ಟಿಗಂತೂ ಜನಸಂಖ್ಯಾ ಸಮಸ್ಯೆ ಭೀಕರ ರೂಪತಾಳಿದೆ. ಭಾರತದಲ್ಲಿ ಪ್ರತಿವರ್ಷವೂ ಸುಮಾರು 13 ದಶಲಕ್ಷ ಮಕ್ಕಳ ಜನನವಾಗುತ್ತಿದೆ. ಪ್ರಸ್ತುತ ಇರುವ ಜನಕೋಟಿಗೆ ನಾವು ಅನ್ನ, ಬಟ್ಟೆ, ವಸತಿಗಳನ್ನು ಪೂರೈಸಲು ಸಾಧ್ಯವಾಗುತ್ತಿಲ್ಲ. ಪರಿಸ್ಥಿತಿ ಹೀಗಿರುವಾಗ ವರ್ಷಂಪ್ರತಿ ಹುಟ್ಟುವ ಹದಿಮೂರು ದಶಲಕ್ಷ ಮಕ್ಕಳ ಹೊಟ್ಟೆಯನ್ನು ನಾವು. ತುಂಬಬಲ್ಲವೇ ಎಂದು ಪ್ರಶ್ನಿಸಿಕೊಂಡಾಗ ಭಾರತದ ಭವಿಷ್ಯ ಅಂಧಕಾರಮಯವಾಗಿ ಕಾಣಿಸುವುದರಲ್ಲಿ ಅಚ್ಚರಿಯೇನಿಲ್ಲ. ಜನಸಂಖ್ಯಾ ಬೆಳವಣಿಗೆಯ ಕಡಗೆ ಭಾರತ ಸರಕಾರ ಕೈಗೊಂಡಿರುವ ಕುಟುಂಬ ನಿಯಂತ್ರಣ ಕಾರ್ಯಕ್ರಮಗಳು ಲೆಕ್ಕವಿಲ್ಲದಷ್ಟು. ಆದರೆ ಈ ಕಾರ್ಯಕ್ರಮಕ್ಕೆ ಒಳಪಡುತ್ತಿರುವವರ ಸಂಖ್ಯೆ ತೀರಾ ಅಲ್ಪ. ಹೀಗಾಗಿ ಜನಸಂಖ್ಯಾ ಸಮಸ್ಯೆ ಮತ್ತಷ್ಟು ಜಟಿಲವಾಗುತ್ತಿದೆ. ಶ್ರೀಮಂತನ ಹಣವನ್ನೆಲ್ಲಾ ಕಳ್ಳ ಒಂದೇ ರಾತ್ರಿಯಲ್ಲಿ ದೋಚಿದಂತೆ ಭರದಿಂದ ಬೆಳೆಯುತ್ತಿರುವ ಜನಸಂಖ್ಯೆಯು ಸರಕಾರದ ಕಾರ್ಯಕ್ರಮಗಳ ಫಲವನ್ನು ನುಂಗಿಹಾಕುತ್ತಿದೆ. ಕೃಷಿ ಕ್ಷೇತ್ರದಲ್ಲಿ ಆಧುನಿಕ ವಿಧಾನಗಳನ್ನು ಬಳಸಿ, ಆಹಾರದ ಉತ್ಪಾದನೆಯನ್ನು ಅಧಿಕಗೊಳಿಸಲು ಪ್ರಯತ್ನಿಸಲಾಗುತ್ತಿದೆ. ಆದಾಗ್ಯೂ ದಿನೇದಿನೇ ವೃದ್ಧಿಯಾಗುತ್ತಿರುವ ಜನಸಂಖ್ಯೆಗೆ ಆಹಾರವನ್ನು ಸರಿತೂಗಿಸುವಲ್ಲಿ ದೇಶದ ಸಾಮರ್ಥ್ಯ ಸೋಲುತ್ತಿದೆ.

ಇಂಗ್ಲೆಂಡಿನ ಖ್ಯಾತ ಅರ್ಥಶಾಸ್ತ್ರಜ್ಞ, ಧರ್ಮಗುರು ಥಾಮಸ್ ರಾಬರ್ಟ್ ಮಾಲ್ಥಸ್ ಎರಡು ಶತಮಾನಗಳ ಹಿಂದೆಯೇ ತನ್ನ ದೇಶದಲ್ಲಿನ ಪರಿಸ್ಥಿತಿಗಳ ಹಿನ್ನಲೆಯಲ್ಲಿ ಒಂದು ಸಿದ್ಧಾಂತವನ್ನು ಬರೆದ. ಆಹಾರೋತ್ಪಾದನೆಗಿಂತ ಜನಸಂಖ್ಯೆ ಅತಿ ವೇಗವಾಗಿ ಬೆಳೆಯುತ್ತದೆ. ಇದರ ಬೆಳವಣಿಗೆಯನ್ನು ತಡೆಗಟ್ಟದಿದ್ದರೆ ಮಾನವ ಜನಾಂಗ ಸಂಕಷ್ಟಗಳಿಗೆ ಈಡಾಗಿ ನೈಸರ್ಗಿಕ ವೈಪರೀತ್ಯಗಳಿಗೆ ಬಲಿಯಾಗಬೇಕಾಗುತ್ತದೆ ಎಂದು ಮಾಲ್ಥಸ್ ಹೇಳಿದ. ಬ್ರಹ್ಮಚರ್ಯಪಾಲನೆ, ತಡವಾಗಿ ವಿವಾಹ ಮತ್ತು ಆತ್ಮಸಂಯಮಗಳ ಮೂಲಕ ಜನಸಂಖ್ಯಾ ಬೆಳವಣಿಗೆಯನ್ನು ನಿಯಂತ್ರಿಸಬೇಕು ಎಂದು ಅವನು ಸಾರಿದ. ಸುಧಾರಿತ ಕೃಷಿ ವಿಧಾನಗಳಿಂದ ಏರುತ್ತಿರುವ ಜನಸಂಖ್ಯೆಗೆ ತಕ್ಕಂತೆ ಆಹಾರವನ್ನು ಪೂರೈಸುವುದು ಸಾಧ್ಯ. ಆದ್ದರಿಂದ ಚಿಂತಿಸಬೇಕಾದ್ದಿಲ್ಲ. ಮಾಲ್ಥಸ್ ಒಬ್ಬ ನಿರಾಶಾವಾದಿ, ಅವನ ಕಲ್ಪನೆಗಳೂ ಅಷ್ಟೇ ಟೊಳ್ಳು ; ಎಂದು ಅನೇಕರು ಟೀಕಿಸಿದರು. ಆದರೆ ಮಾಲ್ಥಸ್ 2 ಶತಮಾನಗಳ ಹಿಂದೆ ಹೇಳಿದ್ದು ಇಂದು ಭಾರತಕ್ಕೆ ಅಕ್ಷರಶಃ ಸತ್ಯವಾಗಿ ಪರಿಣಮಿಸಿದೆ. ಅವನ ಭವಿಷ್ಯವಾಣಿ ಭಾರತದಲ್ಲಿ ನಿಜರೂಪತಾಳಿದೆ. ಹಿಂಜಿದಷ್ಟು ಸಡಿಲಗೊಳ್ಳದೆ ಬಿಗಿಯಾಗುತ್ತಿರುವ ರಾಷ್ಟ್ರವ್ಯಾಪಿಯಾದ ಜನಸಂಖ್ಯಾ ಸ್ಫೋಟದಿಂದಾಗಿ ಭಾರತ ತಲ್ಲಣಗೊಂಡಿದೆ. ಆರ್ಥಿಕ ಅಭಿವೃದ್ಧಿಯಾದಂತೆಲ್ಲಾ ಜನಸಂಖ್ಯೆಯ ಬೆಳವಣಿಗೆ ಕಡಿಮೆಯಾಗುತ್ತಾ ಹೋಗುತ್ತದೆ ಎಂದು ಹೇಳಲಾಗುತ್ತದೆ. ಆದರೆ ಇದು ಮುಂದುವರಿದ ದೇಶಗಳ ಅನುಭವ ಮಾತ್ರ. ಭಾರತದಂತಹ ಹಿಂದುಳಿದ ದೇಶದ ಸಮಸ್ಯೆಯೇ ಬೇರೆ ಸ್ವರೂಪದ್ದು. ಅಭಿವೃದ್ಧಿಯಾದ ಹೊರತು ಜನಸಂಖ್ಯೆಯ ಬೆಳವಣಿಗೆ ಕಡಿಮೆಯಾಗದು. ಜನಸಂಖ್ಯೆಯ ಬೆಳವಣಿಗೆ ಕಡಿಮೆಯಾದ ಹೊರತು ಅಭಿವೃದ್ಧಿಯನ್ನು ಸಾಧಿಸಲಾಗದು. ಇದು ಇಂದಿನ ಭಾರತ ಎದುರಿಸುತ್ತಿರುವ ವಿಷಮತೆ. ಬಹು ಜನರಿಂದ ಚರ್ಚಿಸಲ್ಪಡುತ್ತಿರುವ ಈ ಸಮಸ್ಯೆಯು ಇಂದಿನ ಶತಮಾನದ ಅತ್ಯಂತ ಪ್ರಬಲ ಸಮಸ್ಯೆಯಾಗಿ ಕಾಡುತ್ತಿದೆ.

ಕೆಳಗಿನ ಅಂಶಗಳಿಂದ ಜನಸಂಖ್ಯಾ ಸ್ಫೋಟದ ವಿಷಮತೆಯನ್ನು ಸ್ಪಷ್ಟಪಡಿಸಿಕೊಳ್ಳಬಹುದು—

1) ಭಾರತದ ಜನಸಂಖ್ಯೆ 450 ದಶಲಕ್ಷ ಮೀರಿದ್ದೇ ಆದರೆ ಅದು ಅಪಾಯದ ಸೂಚಕ ಎಂದು ತಜ್ಞರು ಈ ಹಿಂದೆಯೇ ಅಭಿಪ್ರಾಯ ಪಟ್ಟಿದ್ದರು. ಆದರೆ ನಮ್ಮ ದೇಶದ ಜನಸಂಖ್ಯೆ 1971 ರ ಜನಗಣತಿಯ ಪ್ರಕಾರ 547 ದಶಲಕ್ಷ ಮುಟ್ಟಿದೆ. ಭಾರತದ ಸದ್ಯದ ಉತ್ಪಾದನೆ ಹಾಗೂ ಸಂಪತ್ತು ಹೆಚ್ಚಿನ ಜನ ಸಂಖ್ಯೆಯನ್ನು ಪೋಷಿಸುವಲ್ಲಿ ಯಾತಕ್ಕೂ ಸಾಲದಾಗಿದೆ. ಭಾರತ ಇತ್ತೀಚೆಗೆ ಎಲ್ಲಾ ಕ್ಷೇತ್ರಗಳಲ್ಲೂ ಅಭಿವೃದ್ಧಿಯನ್ನು ಸಾಧಿಸುತ್ತಿದೆ. ಆದರೆ ದಿನದಿನಕ್ಕೂ ಬೆಳೆಯುತ್ತಿರುವ ಜನಸಂಖ್ಯೆಯಿಂದಾಗಿ ಅದರ ಫಲ ನಿಷ್ಫಲವಾಗುತ್ತಿದೆ. ಇದರಿಂದಾಗಿ ಜನ ಬಡತನದ ರೇಖೆಯನ್ನು ದಾಟಿ ಬರಲು ಸಾಧ್ಯವಾಗುತ್ತಿಲ್ಲ.

2) ಜನಸಂಖ್ಯಾ ಸಮಸ್ಯೆಯ ಬಗೆಗಿನ ಲೆಕ್ಕಾಚಾರಗಳು ನಿಜಕ್ಕೂ ದಿಗ್ಭ್ರಮೆಗೊಳಿಸುತ್ತವೆ. ಭಾರತದಲ್ಲಿ 1.4 ಸೆಕೆಂಡಿಗೆ ಒಂದರಂತೆ, ದಿನಕ್ಕೆ 52 ಸಾವಿರದಂತೆ, ವರ್ಷಕ್ಕೊಮ್ಮೆ ಸುಮಾರು 13 ದಶಲಕ್ಷದಂತೆ, ಜನಸಂಖ್ಯೆ ಹೆಚ್ಚುತ್ತಿದೆಯೆಂದು ಅಂದಾಜು ಮಾಡಲಾಗಿದೆ. ಈಗ ಸದ್ಯಕ್ಕೆ ನಮ್ಮ ದೇಶದಲ್ಲಿರುವ ಜನರ ಅವಶ್ಯಕತೆಗಳನ್ನು ಪೂರೈಸಲು ಸಾಧ್ಯವಾಗದಿರುವಾಗ ಪ್ರತಿ ವರ್ಷವೂ ಸೃಷ್ಟಿಯಾಗುವ 13 ದಶಲಕ್ಷ ಬಾಯಿಗಳು ಭಾರತದ ಪಾಲಿಗೆ ಮಿತಿಮೀರಿದ ಹೊರೆ ಎನ್ನದೆ ವಿಧಿಯಿಲ್ಲ. ಇದು ಹೀಗೆಯೇ ಮುಂದುವರಿದರೆ ಇನ್ನು ಮುಂದಿನ 25 ವರ್ಷಗಳಲ್ಲಿ ಭಾರತದ ಜನಸಂಖ್ಯೆ 100 ಕೋಟಿಯನ್ನು ಮುಟ್ಟುತ್ತದೆ. ಹೀಗಾದಲ್ಲಿ ದೇಶ ಎಷ್ಟೇ ಪ್ರಗತಿ ಸಾಧಿಸಿದರೂ, ಅದಕಿಂತಲೂ ಹಸಿವು, ಅಜ್ಞಾನ, ಬಡತನ ರೋಗರುಜನಗಳವೇ ಮೇಲುಗೈಯಾಗಿ ಜನರು ಈ ವಿಷ ಚಕ್ರದಲ್ಲಿ ಸಿಲುಕಿ

ಕೊಂಡು ದುರ್ಭರ ಹಾಗೂ ಅಸಹನೀಯ ಬದುಕನ್ನು ಸಾಗಿಸಬೇಕಾಗುತ್ತದೆ. ಈ ಬಗ್ಗೆ ವಿಶ್ವ ಬ್ಯಾಂಕಿನ (World Bank) ಅಧ್ಯಕ್ಷ ರಾಬರ್ಟ್ ಮ್ಯಾಕ್ನ-ಮಾರ್ ಹೀಗೆ ಅಭಿಪ್ರಾಯ ಪಟ್ಟಿದ್ದಾರೆ. "ಜನಸಂಖ್ಯಾ ಸ್ಫೋಟವನ್ನು ನಿಯಂತ್ರಿಸದಿದ್ದರೆ ಅದು ಆಸ್ಫೋಟಗೊಂಡು ಸಂಕಟ, ಅಮಾನುಷತೆ ಮತ್ತು ಹಿಂಸೆಗಳಲ್ಲಿ ಕೊನೆಗೊಳ್ಳುತ್ತದೆ; ಈ ಮಾತುಗಳು ಎಷ್ಟು ಭಯಾನಕವೋ ಅಷ್ಟೇ ಅರ್ಥಪೂರ್ಣವಾಗಿವೆ.

3) ಇತರ ದೇಶಗಳಿಗಿಂತಲೂ ಭಾರತದ ಭೂ ಭಾಗ ಬಹಳ ಕಡಿಮೆ ಇದೆ. ಭಾರತದ ಭೂಭಾಗಕ್ಕಿಂತಲೂ ಆಸ್ಟ್ರೇಲಿಯದ ಭೂ ಭಾಗ ಸುಮಾರು 2½ ಪಟ್ಟು ಹೆಚ್ಚಾಗಿದೆ: ಆದರೆ ಆಸ್ಟ್ರೇಲಿಯದ ಒಟ್ಟು ಜನಸ ಂಖ್ಯೆಕೇವಲ 13 ದಶಲಕ್ಷ. ಇದು ಅಚ್ಚರಿ ಎನಿಸಿದರೂ ಸತ್ಯ. ಈ ಜನಸಂಖ್ಯೆಯನ್ನು ಭಾರತ ಪ್ರತಿ ವರ್ಷವೂ ತನ್ನ ಜನ ಸಂಖ್ಯೆಗೆ ಸೇರಿಸುತ್ತದೆ. ಅಂದರೆ ಪ್ರತಿ ವರ್ಷವೂ ಭಾರತದಲ್ಲಿ ಒಂದು ಆಸ್ಟ್ರೇಲಿಯ ಸೃಷ್ಟಿಯಾಗುತ್ತದೆ: ರಷ್ಯಾ ದೇಶದ ಭೂ ಭಾಗವು ಭಾರತದ ಭೂ ಭಾಗಕ್ಕಿಂತ ಸುಮಾರು 7 ರಷ್ಟು ಹೆಚ್ಚಾಗಿದೆ. ಆದರೆ ಅದರ ಜನಸಂಖ್ಯೆ ಭೂಭಾಗವು ಭಾರತದ ಅರ್ಧದಷ್ಟು ಮಾತ್ರವಿದೆ. 1971 ರಲ್ಲಿ ರಷ್ಯಾದ ಜನ ಸಂಖ್ಯೆ 265 ದಶಲಕ್ಷಗಳಿತ್ತು. ವಿಶ್ವದಲ್ಲಿ ಭಾರತದ ಭೂಭಾಗ ಶೇಕಡ 2.4 ಹಾಗೂ ಆದಾಯ ಶೇಕಡ 1.5 ಭಾಗದಷ್ಟು ಇದೆ. ಭಾರತದ ಜನಸಂಖ್ಯಾ ಸಮಸ್ಯೆಯ ವಿಶೇಷತೆ ಎಂದರೆ ಅದು ಯಾವ ಪರಿಹಾರ ಕಾರ್ಯಕ್ರಮಕ್ಕೂ ಜಗ್ಗದೆ, ಕುಗ್ಗದೆ ಇರುವುದು. ಭಾರತದಲ್ಲಿ ಜನಸಂಖ್ಯಾ ಸ್ಫೋಟದ ಪರಿಣಾಮವನ್ನು ಎದುರಿಸದಿರುವ ಕ್ಷೇತ್ರವೇ ಇಲ್ಲ ಎನ್ನಬಹುದು. ಇದರಿಂದಾಗಿ ಮುಂದುವರಿಯಲು ಪ್ರಯತ್ನಿಸಿದಷ್ಟೂ ನಾವು ಹಿಂದೆ ಬೀಳುತ್ತಿದ್ದೇವೆ.

ಯೂರೋಪ್ ಮತ್ತು ಇತರ ಮುಂದುವರಿದ ದೇಶಗಳಲ್ಲಿ ಜನರ ಜೀವನ ಮಟ್ಟ ಬಹುವಾಗಿ ಸುಧಾರಿಸಿದೆ. ಆದರೆ ಭಾರತದಲ್ಲಿ ಇದಕ್ಕೆ ತದ್ವಿರುದ್ಧವಾಗಿದೆ. ಮಾನದಂಡದಿಂದ ವಿಚಾರಿಸಿದ್ದಲ್ಲಿ ನಮ್ಮ ದೇಶದಲ್ಲಿ ಜನಸಂಖ್ಯೆ ಹೆಚ್ಚಾಗಿದೆಯೆಂದು ನಿಸ್ಸಂಶಯವಾಗಿ ಹೇಳಬಹುದು. ಸಾಕಷ್ಟು ಆಹಾರ ಧಾನ್ಯಗಳ ಪೂರೈಕೆ ಇಲ್ಲದಿರುವುದು, ಕೀಳಾದ ಜೀವನ ಮಟ್ಟ, ಕಡುಬಡತನ ಇತ್ಯಾದಿಗಳೆಲ್ಲವೂ ನಮ್ಮ ಹೆಚ್ಚಿನ ಜನಸಂಖ್ಯೆಯ ಜಾಡ್ಯದ ದ್ಯೋತಕಗಳಾಗಿವೆ. ಭಾರತ ಕೃಷಿ ಪ್ರಧಾನ ದೇಶವಾಗಿದ್ದು, ಶೇಕಡ 70 ರಷ್ಟು ಕೃಷಿಕರನ್ನು ಹೊಂದಿದ್ದೂ, ನಮ್ಮ ರೈತರು ದಕ್ಷರು, ಚತುರರು, ಮತ್ತು ಕಷ್ಟ ಸಹಿಷ್ಣುಗಳಾಗಿದ್ದೂ ನಾವು ನಮ್ಮ ಹೊಟ್ಟೆ ತುಂಬಿಸಿಕೊಳ್ಳಲು ಪರದೇಶಗಳನ್ನು ಅವಲಂಬಿಸಿದ್ದೇವೆ. ಇದು ನಿಜಕ್ಕೂ ಹಾಸ್ಯಾಸ್ಪದ. ಇದಕ್ಕೆ ಮುಖ್ಯ ಕಾರಣವೇನೆಂದರೆ "ಅಜ್ಜನೂತದ್ದಿಲ್ಲಾ ಮೊಮ್ಮಗನ ಉಡುದಾರಕ್ಕೆ ಎಂಬಂತೆ ಬೆಳೆಯುತ್ತಿರುವ ಜನಸಂಖ್ಯೆಗೆ ಆಹಾರವನ್ನು ಪೂರೈಸುವಲ್ಲಿ ಭಾರತದ ಸಾಮರ್ಥ್ಯ ಸೋಲುತ್ತಿರುವುದು ಇದರಿಂದಾಗಿ ಜನರ ಜೀವನ ಮಟ್ಟವನ್ನು ಏರಿಸಬೇಕೆಂಬ ಭಾರತದ ಧ್ಯೇಯ ಬಿಸಿಲ್ಗುದುರೆಯಾಗಿ ಪರಿಣಮಿಸಬಹುದೆಂಬ ಭೀತಿ ಕಾಡುತ್ತಿದೆ.

—





# ವಚನಕಾರ್ತಿ ಶಿವಯೋಗಿಣಿ ಅಕ್ಕನಾಗಮ್ಮ

—ಎಸ್. ಎಸ್. ಭೂಸರಡ್ಡಿ.

"ಮನದೊಡೆಯ ಮಹಾದೇವ ಮನವನೋಡಿಹೆನೆಂದು
ಮನುಜರಕೈಯಿಂದ ಒಂದೊಂದು ನುಡಿಸುವನು
ಇದಕ್ಕೆ ಕಳವಳಿಸದಿರು ಮನವೆ, ಕಾತರಿಸದಿರುತನುವೆ,
ನಿಜವ ಮರೆಯದಿರು ಕಂಡಾ, ನಿಶ್ಚಿಂತನಾಗಿರು ಮನವೆ,
ಬಸವಣ್ಣ ಪ್ರಿಯ ಚನ್ನಸಂಗಯ್ಯನು
ಬೆಟ್ಟದನಿತಪರಾಧವನು ಒಂದು ಬೊಟ್ಟನಲ್ಲಿ ತೊಡೆವನು"

ಶಿವಶರಣ-ಶಿವಶರಣೆಯರು; ನಿಜವನರಿದ ನಿಶ್ಚಿಂತರು; ಮನವನರಿದ ಮಹಂತರು; ಬದುಕಿನ ನೆಲೆ-ಬೆಲೆಯನ್ನು ಗುರುತಿಸಿದವರು. ಬದುಕು ಹಸನಾಗಬೇಕು; ಬಂಗಾರವಾಗಬೇಕು ಎಂದು ಹಲುಬಿ ಹಂಬಲಿಸಿದರು. ತಮ್ಮ ಅಪಾರ ಅನುಭವದ ಅಮೃತ ರಸಪಾನವನ್ನು ವಚನಗಳ ಮುಖಾಂತರ ಉಣಬಡಿಸಿದ್ದಾರೆ. ಅಂದು ಅವರು ಬಿಟ್ಟ ಬೆಳಕು ಇಂದಿಗೂ ದೇದಿಪ್ಯಮಾನವಾಗಿ ಬೆಳಗುತ್ತಿದೆ. ಮಾನವಕುಲ ಪಾವನಮಾಡುತ್ತಿದೆ. ಮಾನವ ಧರ್ಮದ ನಿಜ ಸಂದೇಶವನ್ನು ಬೀರುತ್ತಿದೆ. ಅಂತಯೇ ಸಮಗ್ರ ಶರಣ ಸಾಹಿತ್ಯದ ಉಳುವಿಗಾಗಿ ಸರ್ವಾರ್ಪಣ ಮಾಡಿದ ಮಹಾಮಾತೆ ಶಿವಯೋಗಿಣಿ ಅಕ್ಕನಾಗಮ್ಮನು ಮೇಲಣ ವಚನದಲ್ಲಿ ಮುತ್ತಿನಂತಹ ಮಾತುಗಳನ್ನು ಸಹಜವಾದ ಮಾಟದಲ್ಲಿ ಸುಂದರವಾಗಿ ಬಿಡಿಸಿದ್ದಾಳೆ. ನಮ್ಮೆಲ್ಲರ ಹೃದಯಕಮಲವನ್ನು ಅರಳಿಸಿದ್ದಾಳೆ; ಶರಣ ಸಂಸ್ಕೃತಿಯ ಸೌರಭವನ್ನು ಸೂಸಿದ್ದಾಳೆ. ಇವು ಅರಿಯದೆ ಎಂತಹ ತಪ್ಪು ಮಾಡಿದರೂ ಮನದೊಡೆಯ ಮಹಾದೇವ ಬೊಟ್ಟಿನಲ್ಲಿ ತೊಡೆವನು; ಇದಕ್ಕಾಗಿ ಕಳವಳಿಸ ಬೇಡ, ಕಾತರಿಸಬೇಡ - ಎನ್ನುವ ಸಾಂತ್ವನ ಸುಧಾಮೃತ ಕರುಣಾಳುವಿನಂತೆ ಕೈಪಿಡಿದು ಮುನ್ನಡಿಸುತ್ತದೆ. ತಪ್ಪು ಮಾಡುವುದು ಸಹಜ ಪ್ರವೃತ್ತಿ. ಆ ತಪ್ಪಿಗಾಗಿ ಮನದೊಡೆಯ ಮಹಾದೇವನನ್ನು ಮೊರೆ ಹೋದರೆ ಸಾಕು.

'ಅರಿಯದೆ ಮರಹಿಂದ ಬಂದನಲ್ಲದೆ,
ಇನ್ನು ಅರಿದ ಬಳಿಕ ಬಳಲುಲುಂಟೆ ?
ಹೃದಯ ಕಮಲ ಮಧ್ಯದಲ್ಲಿ ನಿಜವು ನೆಲೆಗೊಂಡ ಬಳಿಕ
ಪುಣ್ಯಪಾಪವೆಂಬುವಕ್ಕೆ ಹೊರಗಾದೆನು.
ಭುವನ ಹದಿನಾಲ್ಕರೊಳಗೆ ಪರಿಪೂರ್ಣನಿರಂಜನ
ಜ್ಯೋತಿಯಾಗಿ ಬೆಳಗಿವ ಪ್ರಭುವ ಕಂಡು ಬದುಕಿದೆನು
ಕಾಣಾ, ಬಸವಣ್ಣ ಪ್ರಿಯ ಚನ್ನಸಂಗಯ್ಯ'

ಶಿವಯೋಗ ಸಹಜ ಮಾರ್ಗವನ್ನು ಈ ವಚನ ಎತ್ತಿ ತೋರಿಸುತ್ತದೆ. ಮಹಾಮಾತೆ ಅಕ್ಕನಾಗಮ್ಮನು ಮುಟ್ಟಿದ ಆಧ್ಯಾತ್ಮಿಕ ನೆಲಗಟ್ಟನ್ನು ಸೊಗಸಾಗಿ ವಿವರಿಸುತ್ತದೆ. ಮರದಡೆ ಮಾನವ; ಅರಿದೊಡೆ ಶರಣನೆಂಬ ಸೂಕ್ತಿಗೆ ಸಾಕ್ಷಿಯಾಗಿ ನಿಂತಿದೆ. ನಿಜಜ್ಞಾನಿಯ ಲಕ್ಷಣಗಳು ಒಡಮೂಡಿವೆ. ನಿಜವು ನೆಲೆಗೊಂಡ ಮೇಲೆ ಪುಣ್ಯ ಪಾಪಗಳಿಗೆ ಇಂಚಿಲ್ಲ.

'ಗುರುಸಂಬಂಧಿ ಗುರುಭಕ್ತಯ್ಯನು
ಲಿಂಗ ಸಂಬಂಧಿ ಪ್ರಭುದೇವರು
ಜಂಗಮ ಸಂಬಂಧಿ ಸಿದ್ಧರಾಮರು
ಪ್ರಸಾದ ಸಂಬಂಧಿ ಮರುಳ ಶಂಕರ ದೇವರು
ಪ್ರಾಣಲಿಂಗ ಸಂಬಂಧಿ ಅನಿಮಿಷದೇವರು
ಶರಣ ಸಂಬಂಧಿ ಘಟ್ಟಿವಾಳಯ್ಯನು.
ಐಕ್ಯ ಸಂಬಂಧಿ ಅಜಗಣ್ಣಯ್ಯನು
ಸರ್ವಾಚಾರ ಸಂಬಂಧಿ ಚನ್ನಬಸವಣ್ಣನು
ಇಂತಿವರ ಸಂಬಂಧ ಎನ್ನ ಸರ್ವಾಂಗದಲ್ಲಿ ನಿಂದು
ಬಸವಣ್ಣ ಪ್ರಿಯ ಚನ್ನಸಂಗಯ್ಯನ
ಹೃದಯ ಕಮಲದಲ್ಲಿ ನಿಜನಿವಾಸಿಯಾಗಿದ್ದನು.

ಅಂದಿನ ಶರಣರ ವ್ಯಕ್ತಿ ವಿಶೇಷ ಗುಣಗಳನ್ನು ಎತ್ತಿ ಹೇಳಿದ ಮೇಲಣ ವಚನ ಹೃದಯಂಗಮವಾಗಿದೆ. ಇಂದು ನಾವು ಅವಶ್ಯವಾಗಿ ಅಳವಡಿಸಿಕೊಳ್ಳಬೇಕಾದ ಗುಣಗಳಾವುವು ಎಂಬುದನ್ನು ಶ್ರೇಷ್ಠ ಶರಣರ ಹೆಸರುಗಳ ಹಿಂದಿರುವ ಗುರು, ಲಿಂಗ, ಜಂಗಮ, ಪ್ರಸಾದ, ಶರಣ, ಇತ್ಯಾದಿಗಳು ನಮ್ಮಲ್ಲಿ ಅಲ್ಪ ಮಟ್ಟಿಗಾದರೂ ಅಳವಡಿಸಿಕೊಂಡಿದ್ದೇವೆಯೋ ? ನಡೆ-ನುಡಿಗಳು, ಆಚಾರ ವಿಚಾರಗಳು ಒಂದಾಗಿಯೋ ? ಒಳಗೊಂದು ಪರಿ, ಹೊರಗೊಂದು ಪರಿಯಾಗಿ ಬಾಳುವ ಗೂಸುಂಬೆಗಳಾಗಿದ್ದೇವೆ; ಜೀವಂತ ಹೆಣವಾಗಿದ್ದೇವೆ. ಅಂಕೆಯ ಸರ್ವಾಂಗದಲ್ಲಿಯೂ ಲಿಂಗ ಗುಣಗಳನ್ನು ಅಳವಡಿಸಿಕೊಳ್ಳುವ ಸಂದೇಶ ಮೇಲಣ ವಚನದಲ್ಲಿದೆ. ನಮ್ಮ ಅಂಗ ಗುಣಗಳು ಅಡಗಿ ಲಿಂಗ ಗುಣಗಳು ಬೆಳೆಯಬೇಕು. ನಿಜ ಪದ ಪಡೆಯುವ ಸುಗುಮ ದಾರಿಯಿದು.

ಎನ್ನ ತನು ಚನ್ನಬಸವಣ್ಣನ ಬಯಲ ಬೆರಸಿತ್ತು.
ಎನ್ನಮನ ಸಂಗನ ಬಸವಣ್ಣನ ನಿಜಪದವ ಬೆರಸಿತ್ತು.
ಎನ್ನ ಪ್ರಾಣ ಅಲ್ಲಮಾ ಪ್ರಭುದೇವರ ಅರಿವ ಬೆರಸಿತ್ತು.
ಇಂತೀ ಮೂವರ ಒಂದೊಂದ ಹಂಚಿಕೊಂಡ ಕಾರಣ,
ಎನನೇನೂ ಇಲ್ಲದೆ, ಬಸವಣ್ಣ ಪ್ರಿಯ ಚನ್ನಸಂಗಯ್ಯನ
ಹೃದಯ ಕಮಲದಲ್ಲಿ ನಿಜನಿವಾಸಿಯಾಗಿದ್ದೆನು.

ಇಲ್ಲಿ ಮೂಡಿ ಬಂದಿರುವ ಭಾವ ಸೌರಭ ಅರ್ಥಪೂರ್ಣವಾಗಿದೆ. ಅಂತಯೇ–

'ಎನ್ನ ಭವದ ಬಳ್ಳಿಯ ಬೇರು ಹರಿಯಿತ್ತಯ್ಯ,
ಸಂಗನ ಬಸವಣ್ಣನ ಒಕ್ಕುದ ಕೊಂಡೆನಾಗಿ,
ಎನ್ನ ಮನದ ಕಪಟ ಹಿಂಗಿತ್ತಯ್ಯ,
ಚೆನ್ನಬಸವಣ್ಣನ ಕರುಣವ ಪಡೆದನಾಗಿ,
ಎನ್ನಂತರಂಗದ ಸಂದು ಸಂಶಯ ತೊಲಗಿತ್ತೆಂದು,
ಬಸವಣ್ಣನ ಪ್ರಿಯ ಚನ್ನಸಂಗಯನಲ್ಲಿ,
ಎನ್ನ ಪರಮಗುರು ಅಲ್ಲಮಾ ಪ್ರಭುದೇವರ
ಶ್ರೀ ಚರಣವ ಕಂಡೆನಾಗಿ'

ಎಂದು ಉದ್ಗಾರ ತೆಗೆದ ಮೇಲಣ ವಚನವು ನಮ್ಮ ಭವದ ಬಳ್ಳಿಯ ಬೇರು ಹರಿದುಕೊಳ್ಳುವ ಮಹಾಮಾರ್ಗವೂ ಅಹುದು. ಅದೆಷ್ಟು ಸರಳವಾಗಿ ಸುಂದರವಾಗಿ ಸಹಜವಾಗಿ ಮುಕ್ತಿಯದಾರಿಯನ್ನು ಅಕ್ಕನಾಗಮ್ಮ ಈ ಲೋಕದ ಮರುಳು ಮಾನವರಿಗೆ ತೋರಿದ್ದಾಳೆ. ಅವರು ನಿಜ ಧರ್ಮದ ಗುಟ್ಟನ್ನು ಅರುಹಿದ್ದಾಳೆ.



ವಿಶ್ವ ವಿಶಾಲ ಉದಾತ್ತ ಮನೋಭಾವನೆಯನ್ನು ವ್ಯಕ್ತಪಡಿಸಿದ್ದಾಳೆ. ಹೃದಯ ಪ್ರಧಾನ ಧರ್ಮದ ನಿಜಮುಕ್ತಕಗಳಿವು.

ಜಗತ್ತಿನ ಇತಿಹಾಸದಲ್ಲಿ ದೇವರನ್ನು ಪತಿ ಸ್ವರೂಪವಾಗಿ ಕಾಣುವ, ತಮ್ಮನನ್ನೇ ಗುರುವೆಂದು ಭಾವಿಸುವ ಉದಾಹರಣೆಗಳು ವಿರಳತಮ.

ಅಕ್ಕನಾಗಮ್ಮ ಅಣ್ಣ ಬಸವಣ್ಣನವರ ಅಕ್ಕರೆಯ ಅಕ್ಕ. ಅವರ ಬಾಳಿನ ನೆರಳಾಗಿ ಇದ್ದವಳು ಅವರ ಸುಖ ದುಃಖಗಳಲ್ಲಿ ಪಾಲುದಾರಳು. ಇಲ್ಲಿ ವ್ಯಕ್ತಪಡಿಸಿದ ಅಕ್ಕನಾಗಮ್ಮ ಭಾವನೆಗಳೂ ನಮ್ಮ ಭಾವನೆಗಳು ಆಗಬೇಕು

"ಎನ್ನಕುಲಸೂತಕವ ಕಳೆದಾತ ಬಸವಣ್ಣ
ಎನ್ನಛಲಸೂತಕವ ಕಳೆದಾತ ಬಸವಣ್ಣ
ಎನ್ನ ತನು ಸೂತಕವ ಕಳೆದಾತ ಬಸವಣ್ಣ
ಎನ್ನ ಮನ ಸೂತಕವ ಕಳೆದಾತ ಬಸವಣ್ಣ

ಎನ್ನ ಅರುಹುವ ಅಹಿನ ಸಂದು ಸಂಶಯ ಬಿಡಿಸಿದಾತ ಬಸವಣ್ಣ
ಎನ್ನ ತನ್ನೊಳಗೆ ಇಂಬಿಟ್ಟಕೊಂಡಾತ ಬಸವಣ್ಣ
ನಿಜದ ನಿರ್ವಯಲ ಬಾಗಿಲ ನಿಜವ ತೋರಿದಾತ ಬಸವಣ್ಣ"

ಅಲ್ಲದೆ

ಬಸವನೆ ಮುಖ ಸೆಜ್ಜೆ, ಬಸವನೆ ಅಮುಶೋಕ್ಯ,
ಬಸವಾ, ಸಂಗನ ಬಸವಲಿಂಗಾ ಜಮತು.
ಬಸವನ ಬೆಸಲಾದ ಚಾಣಲೆ ನಾನಯ್ಯ
ಬಸವಾ! ಬಸವಾ! ಬಸವಾ!

ಹೀಗೆ ಜಾಗತಿಕ ಧಾರ್ಮಿಕ ಮಹಾಪುರುಷರ ಸಾಲಿನಲ್ಲಿ ಧ್ರುವತಾರೆಯಂತ-ದೇದಿಪ್ಯಮಾನನಾಗಿ ಬೆಳಗುತ್ತಿರು ಭಕ್ತಿ ಭಾಂಡಾರಿ ಅಣ್ಣ ಬಸವಣ್ಣನವರನ್ನು ರೂಪಿಸಿರ ಮಹಾಶಕ್ತಿಯೇ ಶಿವಯೋಗಿಣಿ ಅಕ್ಕನಾಗಮ್ಮ! ಕರ್ಮಯೋಗಿಯಾಗಿದ್ದ ಸಿದ್ಧರಾಮನನ್ನು ಮಹಾಶಿವಯೋಗಿಯನ್ನಾಗಿ ಪರಿವರ್ತಿಸಿದ ಷಟಸ್ಥಲ ಚಕ್ರವರ್ತಿ ಮಹಾಜ್ಞಾನಿ ಚೆನ್ನಬಸವಣ್ಣನವರಿಗೆ ಜನ್ಮಕೊಟ್ಟ ಪುಣ್ಯದ ಪುತ್ಥಳಿಯೇ ಅಕ್ಕನಾಗಮ್ಮ!! ಅಣ್ಣನ ಮಹಾಮನೆಯ ದಾಸೋಹಕಾರ್ಯ ತೃಪ್ತಿಕರವಾಗಿ ನಡೆಯುವಂತೆ ಸೂತ್ರ ಮಾರ್ಗದರ್ಶನ ಮಾಡಿದ ಮಹಾ ಮಾತೆಯೇ ಅಕ್ಕನಾಗಮ್ಮ!!! ಅಕ್ಕನಾಗಮ್ಮ ಐತಿಹಾಸಿಕ ಪ್ರಸಿದ್ಧ ಮಹಾ ಶರಣೆ. ಅವಳ ಪಾವನಮಯ ಪವಿತ್ರ ಜೀವನ ಇಂದಿನ ಮಹಿಳೆಯರಿಗೂ ಸ್ಫೂರ್ತಿದಾಯಕ. ತಾಳ್ಮೆ, ಸಹನೆಗಳಿಗೆ ಇನ್ನೊಂದು ಹೆಸರು. ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಎಂದೆಂದಿಗೂ ಮರೆಯಲಾಗದ ಮಹಾ ಮಹಿಳೆಯೆಂಬುದನ್ನು ಮರೆಯಲಾಗದು; ಮರೆಯಬಾರದು. ಇಂದು ವೀರಶೈವ ಧರ್ಮ ಉಳಿದಿದ್ದರೆ, ವಚನ ಸಾಹಿತ್ಯವು ಜಗದಗಲ ಮುಗಿಲಗಲ ಹಬ್ಬಿ ಹಬ್ಬಿ ಹರಡಿ ದಾಂಗುಡಿ ಇಟಿದ್ದರೆ ಈ ಮಹಾ ತಾಯಿಯ ಮಹಾತ್ಯಾಗವೇ ಕಾರಣ. ಈ ಮಹಾ ತಾಯಿಯ ಸ್ಮರಣೆ ಮಾಡುವುದೇ ಒಂದು ಸುಖದ ಸಾಗರ. ಈ ತಾಯಿಗೆ ಜನ್ಮ ಕೊಟ್ಟ ಇಂಗಳೇಶ್ವರ ಇಂದಿಗೂ ಪುಣ್ಯ ಕ್ಷೇತ್ರವಾಗಿದೆ. ಕ್ಷೇತ್ರ ಪಾಲರ ರೇವಣ ಸಿದ್ಧರ ಕೃಪಾಂಭುದಿಯಲ್ಲಿ ಮಿಂದು ಈ ತಾಯಿಯು ತಪಸ್ಸು ಮಾಡಿದ ತಾಣವಿದೆ. ಅದನ್ನು ಅಕ್ಕನಾಗಮ್ಮನ ಗವಿಯೆದುರು ಅಲ್ಲಿಯ ಜನತೆ ಅಭಿಮಾನದಿಂದ ತೋರಿಸುತ್ತಾರೆ. ಇಂದು ಅಲ್ಲಿ ಶರಣ ಸಂಸ್ಕೃತಿಯ ಪರಿಮಳ ಬೀರುವ ಶರಣರ ವಚನಾಮೃತಗಳನ್ನು ಬೀರುವ ಬಿಳಿಯ ಕಲ್ಲಿನಲ್ಲಿ ಕೆತ್ತಿಸಿದ ಮಹಾ ಮಂಟಪ ರೂಪುಗ್ಗೊಳ್ಳುತ್ತಿದೆ.

ಅಕ್ಕನಾಗಮ್ಮನಲ್ಲಿ ಮುಕ್ತಾಯಿಯ ಸೋದರ ಪ್ರೇಮ. ಆಯ್ದಕ್ಕಿ ಲಕ್ಕಮ್ಮನ ಕಾಯಕ ನಿಷ್ಠೆ, ಮೋಳಿಗೆಯ ಮಹಾದೇವಿಯ ಸತೀಧರ್ಮ, ನೀಲಲೋಚನೆಯ ಲಿಂಗ ನಿಷ್ಠೆ, ಅಕ್ಕಮಹಾದೇವಿಯ ವೈರಾಗ್ಯ ಮೊದಲಾದ ಅಮೂಲ್ಯ ಗುಣಗಳುಳ್ಳವರಾಗಿದ್ದಳು. ಇದೀಗ ಅವಳು ರಚಿಸಿದ ೧೩ ವಚನಗಳು ಬೆಳಕಿಗೆ ಬಂದಿವೆ. ಇವಳ ವಚನಗಳ ಅಂಕಿತ ಬಸವಣ್ಣ ಪ್ರಿಯ ಚನ್ನಸಂಗಯ್ಯ. ಇವುಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಶರಣಸತಿ-ಲಿಂಗಪತಿ ಭಾವ ಬಸವಾದಿ ಪ್ರಮಥರ ಬಗೆಗೆ ಗುರುಭಾವನೆ ಬಸವಣ್ಣನವರು ಕಲ್ಯಾಣ ಕ್ರಾಂತಿಯ ನಂತರ ಕೂಡಲ ಸಂಗಮದಲ್ಲಿ ಐಕ್ಯವಾದನಂತರ ಅನುಭವಿಸಿದ ಅನಂತ ಭಾವನೆಗಳನ್ನು ಈ ವಚನಗಳಲ್ಲಿ ಕಾಣುತ್ತೇವೆ. ಆಕೆಯ ತತ್ವನಿಷ್ಠೆ, ಅಪ್ರತಿಮ ; ಅಮೋಘ ತಮ್ಮ ಇಳಿವಯಸಿನಲ್ಲಿಯೂ ಭಕ್ತಿಯ ನಿಧಿಯಾಗಿ ಏಕಾಕಿಯಾಗಿ ಉಳುವಿಯಲ್ಲಿ ನಿಂತುಕೊಂಡು ಶರಣ ಸಂಸ್ಕೃತಿಯ ಕೀರ್ತಿ ಪತಾಕೆಯನ್ನು ಎತ್ತಿಹಿಡಿದ ಅವಳ ಸಾಧನೆ ಸಿದ್ಧಿಯ ಇತಿಹಾಸ ನಿಜವಾಗಿಯೂ ರೋಮಾಂಚನಕಾರಿ. ಅತ್ತ ಮಹಾನುಭಾವಿ ಅಣ್ಣ ಬಸವಣ್ಣನವರು ಲಿಂಗದೊಳಗಾದರು. ಇತ್ತ ಚನ್ನಬಸವಣ್ಣ ಬಯಲಾದರು. ಇಂತಹ ವಿಷಮ ಸಂಕಷ್ಟ ಸಮಯದಲ್ಲಿ ಧೈರ್ಯ ಸ್ಥೈರ್ಯದಿಂದ ಬೆನ್ನತ್ತಿ ಬಂದ ವೈರಿಗಳ ಸದ್ದಡಗಿಸಿದ ವೀರಮಾತೆಯೂ ಅಹುದು. ಆಕೆಯ ಪತಿ ಶಿವಸ್ವಾಮಿ. ಕಕ್ಕಯ್ಯನ ಪ್ರಸಾದ ಮಹಿಮೆಯನ್ನು ಎತ್ತಿ ತೋರಿಸುವ ಭರದಲ್ಲಿ ಪುರಾಣಕಾರರು ಮರೆತ ವಿಷಯವನ್ನು ಸಿಂಗಿರಾಜ ಸುಲಭವಾಗಿ ಬಿಡಿಸಿರುವುದು ಆತನ ಐತಿಹಾಸಿಕ ಪ್ರಜ್ಞೆಯನ್ನು ತೋರಿಸುತ್ತವೆ. ಈ ಮಹಾ ಚೈತನ್ಯರ ಅದ್ಭುತ ಬದುಕಿನ ಹಿರಿಮೆಯನ್ನು ನಾವು ಇಂದು ಸ್ಮರಿಸಿಕೊಳ್ಳಬೇಕಾಗಿದೆ. ಇತ್ತೀಚೆ ಈಕೆಯ ಜಯಂತಿಯನ್ನು ನಾಗರ ಪಂಚಮಿಯ ಶುಭ ಸಂದರ್ಭದಲ್ಲಿ ಆಚರಿಸುವ ಉಜ್ವಲ ಪರಂಪರೆ ಬೆಳೆದು ಬಂದಿರುವುದು ಸಮಾಜದ ಆರೋಗ್ಯ ಬೆಳವಣಿಗೆಯ ದೃಷ್ಟಿಯಿಂದ ಉಚಿತವಾಗಿದೆ.

—

# ಶೇಟಜಿಯ ಸೇಡು

—ಎನ್. ಎಸ್. ಗದಗಕರ

"ಅತ್ಯಾಧುನಿಕ ಸಲಕರಣೆಗಳಿಂದೊಡಗೂಡಿದ ಮನೆ. ಬಾಡಿಗೆ ತಿಂಗಳಿಗೆ ಕೇವಲ 33 ರೂಪಾಯಿ"–ಎಂದು ಫಲಕ ಓದಿದ ನನಗೆ ಅತ್ಯಾನಂದ ಆಯಿತು. ಬಹಳ ದಿನ ಹುಡುಕಿ ಹುಡುಕಿ ಬೆಸತ್ತ ನನಗೆ ಇಂತಹದೊಂದು ಬೋರ್ಡು ಓದಿ ಚಿಂತೆ ದೂರಾಯಿತೆನಿಸಿ, ಉತ್ಸಾಹದ ಉಸಿರು ಕರೆದೆ–"ಈ ಪ್ರಕ್ಕಾರ ದಾಮೋದರ ತನ್ನ ಕತೆ ಹೇಳಲನುವಾದ. ಕತೆ ಕೇಳಲು ಕುಳಿತವರು ನಾಲ್ಕು ಜನ, ಅವರಲ್ಲಿ ಅವನ ಮಗ ವಿನಯ ಒಬ್ಬ. ದೂರದ ಮೂಲೆಯೊಂದರಲ್ಲಿ ಕಾಲು ಮೇಲೆ ಕಾಲು ಹಾಕಿಕೊಂಡು ಕುಳಿತ ಗಜಾನನ ಮನಸ್ಸುಗೊಟ್ಟು ಕತೆ ಲಾಲಿಸುತ್ತಿದ್ದ. ಬಾಲೂ, ಭಾನೂ ಏನು ಹೇಳಿದರೂ ಕೇಳಲು ಉತ್ಸುಕರಾದಂತೆ ವಿರಾಮಾಸನದಲ್ಲಿ ಕುಳಿತಿದ್ದರು. "ಮನೆಯೊಡೆಯ ಮೂರು ತಿಂಗಳು ಬಾಡಿಗೆ ಮುಂಗಡ ಬೇಡಿದಾಗ, ನಾನು ಹೆಚ್ಚು ಹಣ ಇಲ್ಲದ್ದರಿಂದ ಆಗ (ತಿಂಗಳ ಮಧ್ಯಭಾಗ) ಒಂದು ತಿಂಗಳದ್ದನ್ನು ಸಹಜವಾಗಿ ಸಲ್ಲಿಸಿದೆ. ನನ್ನ ಹೆಂಡತಿ ಸಖೂಬಾಯಿ, ಅತ್ತೆ ವೃಂದಾವನಿ ಅಂದು ಸಂಜೆಗೇ ಆ ಮನೆಯನ್ನು ಹಿಡಿದಾಗ ನನಗೆ ಸಮಾಧಾನ ಎನಿಸಿತು. ಇನ್ನೇನು ಯಾರ ಕಾಟವೂ ಇಲ್ಲ; ನಿಶ್ಚಿಂತೆಯಿಂದ ನೆಲಸಬಹುದೆಂದು ನಾನು ಹರ್ಷಿಸಿದೆ. ಹೇಗಿದ್ದರೂ ಮನೆಯೊಂದು ಸಿಕ್ಕಿತಲ್ಲ ಸಾಕು–ಇಷ್ಟು ದಿನದ ನಿರಾಸೆಯ ನಂತರ–ಎಂದು ಗ್ರಹಗತಿಯನ್ನು ಹೊಗಳಿಕೊಂಡೆ.

ಆದರೆ ಮನೆಯ ಹೊರಬಾಗಿಲಿನ ದೆವ್ವನಂಥ ಬೀಗ ಕಂಡು ಆಶ್ಚರ್ಯಚಕಿತರಾದೆವು. "ಅಯ್ಯೋ! ಒಂದು ಆನೆಯನ್ನು ಹಚ್ಚಿ ಎಳೆಸಿದರೂ ಬೀಗ ಸರಿದಾಡದು" –ಎಂದು ನನ್ನ ಅತ್ತೆ ಶರಾ ಹಾಕಿದಳು. ನಾನು ಎಣ್ಣೆ ಮಜ್ಜನ ಮುಗಿಸಿದೆ–ಸುಖಮಯ ನಿದ್ರೆ ಆಗಲೆಂದು ಹೊಟ್ಟೆ ತುಂಬ ಸುಗ್ರಾಸ ಭೋಜನ ಮಾಡಿ ಬೇಗ ಮಲಗಲು ಅಣಿಯಾದೆ. ಹಿಂದೆ ನಿದ್ರೆ ಇಲ್ಲದೆ ನಾವು ಕಳೆದ ಇರುಳುಗಳೆಷ್ಟೊ! ಇಂದಾದರೂ ಗಡದ್ದು ನಿದ್ರೆ ಹತ್ತಲಿ ಎಂದು ಹಾರೈಸಿದೆವು. ಸ್ವಲ್ಪ ವೇಳೆಯಲ್ಲಿ ನನ್ನ ಹೆಂಡತಿ, ಅತ್ತೆಗೆ ಗಾಢ ನಿದ್ರೆ ಆವರಿಸಿತು. ಅವರು ಸುಖದಿಂದ ಗೊರಕೆ ಹೊಡೆಯುವ ದನಿ ಕೇಳಹತ್ತಿತು. ನಾನು ಮರುದಿನ ಹೇಗೆ ಇವರಿಗೆ ನೆರೆ-ಹೊರೆಯವರ ಪರಿಚಯ ಮಾಡಿಸಿಕೊಡಬೇಕೆಂದು ಲೆಕ್ಕ ಹಾಕುತ್ತಿದ್ದೆ. ತಿಂಗಳಿನ ವೆಚ್ಚದ ಲೆಕ್ಕ ಮಾಡುವಾಗ ವೇಳೆ ಬಹಳ ಆಯಿತು. ಒಮ್ಮಿಂದೊಮ್ಮೆಲೆ ತಲೆಬಾಗಿಲು ಬಡಿವ ಸದ್ದಾಯಿತು. ಛೆ! ಅದು ನೆರೆಹೊರೆಯವರ ಮನೆಯ ಬಾಗಿಲಿನ ಸದ್ದಿರಬಹುದೆಂದು ಸಮಾಧಾನ ತಳೆದೆ. ಬಾಗಿಲು ತೆರೆದು ಹೋಗಿ ನೋಡುತ್ತೇನೆ! ಯಾರೂ ಇಲ್ಲ! ಬಾಗಿಲು ಭದ್ರಪಡಿಸಿ ಹೀಗೇ ಒಳಗೆ ಬಂದು ಕುಳಿತಕೊಳ್ಳುವಷ್ಟರಲ್ಲಿ, ಮತ್ತೆ ದಡ ದಡ ಶಬ್ದ ಬಾಗಿಲದ್ದು. ಗಸ್ತಿ ತಿರುಗುವವರು ಬಂದರೇನೊ ಎಂದು ಕಿಟಕಿಯಲ್ಲಿ ಹಣಿಕಿಕ್ಕಿ ನೋಡಿದೆ, ಅವರ ಸುಳಿವಿಲ್ಲ. ಎಲ್ಲಿಯಾದರೂ ಇಲಿ, ಹೆಗ್ಗಣ ಇರಬಹುದೇನೊ ಎಂದು ನಿರೀಕ್ಷಿಸಿದೆ, ಯಾತರ ಸುಳಿವಿಲ್ಲ. ದೀಪ ಆರಿಸಿ ಮತ್ತೆ ಮಲಗಿದೆ. ಈಗ ಕಣ್ಣು ಮುಚ್ಚಬೇಕೆನ್ನುವಷ್ಟರಲ್ಲಿ ಯಾರೊ ಹಾಸಿಗೆಯ ಬಳಿಯಿಂದ ಹಾಯ್ದು ಹೋದಂತೆನಿಸಿತು. ನನ್ನ ಮೈಯ್ಯೆಲ್ಲ ತಣ್ಣಗಾಯಿತು. ಒಮ್ಮಿಂದೊಮ್ಮೆಲೆ ಬೀಗದ ಸದ್ದು. ಬೇರೆ! ದೂರದ ಗುಡಿಯ ಗಂಟೆಯ ನಿನಾದದಂತೆ ಅದು ನನ್ನ ಕಿವಿಯನ್ನು ತುಂಬಿತು. ಹಾಸಿಗೆಯಲ್ಲಿ ಎದ್ದು ಕುಳಿತೆ. ಹಣೆ ಮುಟ್ಟಿಕೊಂಡು ನೋಡಿದೆ. ತುಂಬ ಬೆವರಹನಿ! ಬೆಂಕಿಯ ಮುಂದೆ ಕುಳಿತುಕೊಂಡಿರುವೆನೆ? ಎಂದು ಅಂದುಕೊಂಡೆ.

ದಾಮು ಸಿಗರೇಟು ಹಚ್ಚಿ, ಹೊಗೆಯ ಸುರುಳಿ ಬಿಡುತ್ತ ತನ್ನ ಶ್ರೋತ್ರವನ್ನು ಒಬ್ಬೊಬ್ಬರನ್ನಾಗಿ ನಿರೀಕ್ಷಿ

ಸಿದ. ಎಲ್ಲರೂ ಕತೆ ಕೇಳಲು ಕಾತರರಾಗಿದ್ದರು. ಮಂತ್ರ ಮುಗ್ಧರಾಗಿ ಕುಳಿತಿದ್ದರು. ಮುಂದುವರಿಸು ಎಂದು ಎಲ್ಲರೂ ಕೇಳುವಂತೆ ಅನಿಸಿ ಆರಂಭಿಸಿದೆ.

"ನಾನು ಕಡ್ಡಿ ಕೊರೆದು ಹಚ್ಚಿ ನೋಡಿದೆ. ಮಧ್ಯರಾತ್ರಿ ಕಣ್ಣಿಗೆಕಣ್ಣು ಹತ್ತಿರಲಿಲ್ಲ. ಅಷ್ಟರಲ್ಲಿ ನನ್ನ ಹೆಂಡತಿ ಚೀರಾಡಿದಳು – ನನ್ನ ಸಂಗಟ ಹುಡುಗಾಟಿಕೆ ಮಾಡಬ್ಯಾಡ. ಹಿರಿಯರಿಗೆ ಹೇಳಿದೆ ಅಂದರ ನೋಡು ನಿನ್ನ ಆಟಾ" ಎಂದು ಬಾಯಿ ಮುಚ್ಚಿಕೊಂಡಳು. ಮತ್ತೆ ನರಳಾಟ! ಆಗಿನ ಆಕೆಯ ದನಿಯಲ್ಲಿ ಏನೊ ಪರ ಕೀಯತೆ ತೋರಿತು. ಕಡ್ಡಿ ಆರಿತು. ಮತ್ತೆ ಸ್ಮಶಾನ ಮೌನ, ಕಾರ್ಗತ್ತಲು! ನನ್ನ ಕಿವಿ ಬಿಸಿ ಆಗಿದ್ದವು. ದೂರ ಮಲಗಿದ ಅತ್ತೆ ಕನವರಿಸಿದಳು - "ಬಿಡು, ಬಿಡು ಜಗ್ಗಾಡಬ್ಯಾಡ......ಓ......ಓ" ಮತ್ತೆ ತಲೆದಿಂಬ ಇಟ್ಟುಕೊಂಡು ಅಡ್ಡಾದೆ, ಈ ಸಲ ನಿದ್ರೆ ಆವರಿಸುವ ಲಕ್ಷಣ ಕಂಡಿತು.

ಪೂರ್ಣ ಎಚ್ಚರಾದಾಗ ನಸುಕು ಹರಿದಿತ್ತು. ಎಲ್ಲೆಡೆ ಝುಗ್ಗಿಯ ಬೆಳಕು. ನನ್ನ ಅತ್ತೆ ಹೆಂಡತಿ ಕೆಲಸದಲ್ಲಿದ್ದರು. ಇಬ್ಬರ ಮೋರೆಯ ಮೇಲೆಯೂ ಪ್ರೇತಕಳೆ ಸುರಿಯುತ್ತಿತ್ತು. ಬಹು ದಿನದ ಬೇನೆಯ ಬಳಲಿಕೆಯಿಂದ ಚೇತರಿಸಿಕೊಂಡಂತೆ ನಿಸ್ಸತ್ವ ಮುಖಮುದ್ರೆ! ಅವರ ಕೂದಲು ಕೂಡ ಹಳದಿ ವರ್ಣದವಾಗಿದ್ದವು.

ನಾನು ಎದ್ದು ಸ್ನಾನಕ್ಕೆ ಹೋದೆ. ಬೇಕೆಂತಲೆ ತಣ್ಣೀರು ಸ್ನಾನ ಮುಗಿಸಿದೆ. ಅನಂತರ ಉತ್ಸಾಹ ಎನಿಸಿತು. ಹಿಂದಿನ ರಾತ್ರಿ ನಡೆದ ಘಟನೆಯ ಬಗ್ಗೆ ಯಾರ ಮುಂದೂ ಚಕಾರ ಶಬ್ದ ಎತ್ತಲಿಲ್ಲ. ಬಿಸಿ ಬಿಸಿ ಕಾಫಿ, ಮಿಠಾಯಿ ನನ್ನಲ್ಲಿ ದಿನದ ಕೆಲಸಕ್ಕೆ ಹುರುಪು ಹುಟ್ಟಿಸಿದವು ವೇಷ ಭೂಷ ಮಾಡಿಕೊಂಡು ಉತ್ಸಾಹದಿಂದ ಆಫೀಸಿಗೆ ಹೋದೆ. ಅದರೆ ಅಲ್ಲಿ ಕನ್ನಡಿಯಲ್ಲಿ ನೋಡಿಕೊಂಡಾಗ ನನ್ನ ಕೂದಲು ಹಳದಿ ಬಣ್ಣದವು ಆಗಿರುವದು ಕಂಡು ಬಂದಿತು.

ಮನೆಯ ಹೊರಗೆ ಕಾಲಿಟ್ಟಾಗ ನೆರೆಹೊರೆಯಲ್ಲಿ ಎಲ್ಲರೂ ನನ್ನೊಡನೆ ಮಾತನಾಡಬೇಕೆಂದು ತವಕಿಸುವಂತೆ ತೋರಿತು ಏನೊ ಹೇಳಹೋಗಿ ಎಲ್ಲರೂ ಸುಮ್ಮನೆ ಹೋಗುತ್ತಿದ್ದರು. ನಾನೊ? ಎಂದಿನಂತೆ ಗಾಂಭೀರನಾಗಿಯೆ ಇದ್ದೆ!

ಸಂಜೆ ಮನೆಗೆ ಬಂದಾಗ ಹೆಂಡತಿ, ಅತ್ತೆ ಮಧ್ಯಾಹ್ನದ ಕತೆ ಹೇಳಿದರು, ಆಗೀನ ಬೀಗದ ಸದ್ದು ಅವರಿಗೆ ವಿವೇಚನೆಯನ್ನುಂಟು ಮಾಡಿದ್ದಿತು. ಮಧ್ಯಾಹ್ನದ ಊಟದ ನಂತರ ಮಲಗಿದಾಗ ಬಿದ್ದ ಕನಸು ಹೇಳಿದರು—ನಾನು "ಛೆ! ಎಲ್ಲಾ ಭ್ರಾಂತಿ. ನಿಮಗೆ ಅದೇ ಧ್ಯಾನ!" ಎಂದು ವಿಷಯಾಂತರ ಮಾಡಿದೆ. ಏನಿದ್ದರೂ ಮನೆ ಒಳ್ಳೆಯದಿದ್ದು ಬಹಳ ಅಗ್ಗದಲ್ಲಿ ಸಿಕ್ಕಿದ್ದು ಪುಣ್ಯ ಎಂದೆ, ಮತ್ತೆ ರಾತ್ರಿ ಹೆಚ್ಚಾದಂತೆ ಏನೇನು ನಡೆಯಬಹುದೊ ಎಂದು ನಾನೂ ಒಳಗೊಳಗೇ ಚಿಂತಾಕ್ರಾಂತನಾಗಿದ್ದೆ.

ಊಟ ಅಚ್ಚುಕಟ್ಟಾಗಿದ್ದಿತು. ಎಲ್ಲ ಬಿಸಿ ಬಿಸಿ ಅಡುಗೆ, ಚಪಾತಿ, ತಾಜಾಗುಳಂಬ ಮನಸೋಕ್ತವಾಗಿ ತಿಂದೆ. ಎಲೆ ಅಡಿಕೆ ಮೆಲ್ಲುತ್ತ ಹರಟುವಾಗ ಹೆಂಡತಿಗೆ ಹೇಳಿದೆ— "ನೋಡಿಲ್ಲೆ, ಮುಂದಿನ ತಿಂಗಳನಿಂದ ನನಗೆ ಪಗಾರ ಹೆಚ್ಚು ಆಗತದ. ನಿನಗೆ ಕೊರಳ ಹಾರ, ಬನಾರಸಿ ಪ್ರಿತಾಂಬರ ತರೋದು ಖರೆ. ಬೇಕಾದರೆ ಮ್ಯಾಲೊಂದು ಜರದ ಖಣ" ಅತ್ತೆ ಹರ್ಷಿತಳಾದಳು. ವಿರಮಿಸಲು ಎಲ್ಲರೂ ಅಣಿಯಾದೆವು. ತಲೆಬಾಗಿಲು ಹಾಕುವಾಗ ನಾವು ಕ್ರೀಲಿಯನ್ನು ನೆಟ್ಟಗೆ ಪರೀಕ್ಷಿಸಿದೆ. ಒಳಗೆ ಹುಳಹುಪ್ಪಡಿ ಸಿಕ್ಕಿವೆ ಏನೊ ಎಂದು ನೋಡಿದೆ. ಎರಡು ಮೂರು ಸಲ ಜಗ್ಗಿದೆ. ಬಾಗಿಲು ಗಟ್ಟಿ ಹಾಕಿದೆ.

ಎಲ್ಲ ಬಾಗಿಲುಗಳನ್ನು ಮತ್ತೊಮ್ಮೆ ಪರೀಕ್ಷಿಸಿ ಮಲಗಿದೆ, ಮಧ್ಯರಾತ್ರಿಯ ನಂತರ ಎರಡು ಆಕೃತಿಗಳು ನನ್ನ ಹಾಸಿಗೆಯ ಬಳಿಯಿಂದ ಹಾಯ್ದು ಹೋದವು. ಒಬ್ಬ ಲಠ್ಠಮುಟ್ಟ ವ್ಯಕ್ತಿ ಬೆಳ್ಳಿಯ ಕಿಟಕಿಯ ಕರಿ ಕೋಲು ಹಿಡಿದಿದ್ದ. ಇನ್ನೊಬ್ಬ ಕೋಲಿನಂತೆ ನೇರ ವ್ಯಕ್ತಿ. ಒಬ್ಬರನ್ನೊಬ್ಬರು ಸರತಿಯಂತೆ ಸಿಟ್ಟಿನಿಂದ ನೋಡುತ್ತಿದ್ದರು. ಅದೇನು ವಾಸ್ತವ ನೋಟವೊ ಕನಸೋ ನನಗೆ ಹೊಳೆಯಲಿಲ್ಲ. ಆದರೆ ಬೀಗದ ಖಣ ಖಣ ಸದ್ದು ನನ್ನನ್ನು ಎಚ್ಚರಗೊಳಿಸಿತು. ಆ ಈರ್ವರು ವ್ಯಕ್ತಿಗಳು ಎಲ್ಲಿ ಹೋದರು ಎಂದು ಅತ್ತಿತ್ತ ನೋಡಿದೆ. ಆದರೇನು? ಎಲ್ಲೆಡೆ ಕತ್ತಲು, ಏಕಾಂತತೆ! ಸಿಗರ‍್ರೇಟು ಹಚ್ಚಿದೆ.



ಬಳಿಯಲ್ಲಿ ನೋಡುತ್ತೇನೆ! ನನ್ನ ಹೆಂಡತಿ ಒದ್ದಾಡುತ್ತಿದ್ದಳು. ಯಾರೊಡನೆಯೊ ಬಡಿದಾಡುತ್ತಿರುವಂತೆ ತೋರಿತು. ನಾನು ನೋಡಲು ಸಮೀಪಕ್ಕೆ ಹೋದರೆ ನನ್ನನ್ನು ಚಿವೂರಿಕೊಂಡಳು. ಆಕೆಯನ್ನು ಅಲುಗಾಡಿಸಿದೆ. ಅರೆ ನಿದ್ರೆಯಲ್ಲಿ ಬಾಯಿಯಲ್ಲಿ ಬುರುಗು. "ನಾ ಎಲ್ಲಿದ್ದೇನಿ? ಆ ರಾಕ್ಷಸ ಹೋದನೊ ಇಲ್ಲೊ!" ಎಂದು ವಟಗುಡಹತ್ತಿದಳು. ನಾನು ಆಕೆಗೆ ಸಮಾಧಾನ ಹೇಳಿ ಒಂದು ಲೋಟ ತುಂಬ ತಣ್ಣೀರು ಕುಡಿಸಿದೆ. ಅತ್ತ ಇನ್ನೊಂದು ಕೋಣೆಯಲ್ಲಿ ನನ್ನ ಅತ್ತೆ ವಟ ವಟ ಅನ್ನುತ್ತಿದ್ದಳು—, "ಕುಡೀ ಒಂದು ಗುಟುಕು ಗಂಗಾ ಜಲ ಹಾಕರಿ. ಜೀವಾಬಿಡುತ್ತೇನಿ" ಆಕೆಯ ಮುಖ ವಿಕಾರವಾಗಿತ್ತು. ಒಂದೇ ಸಮನೆ ಸಂಕಟದಿಂದ ಹೊರಳಾಡುತ್ತಿದ್ದಳು.

ನಾನು ಮುಖಕ್ಕೆ ನೀರೆರಚಿ ಆಕೆಯನ್ನು ಎಚ್ಚರಗೊಳಿಸಿದೆನು "ಆ ಬಡಪನ್ನ ಯಾಕೆ ಕೊಂದಿರಿ? ಏನು ಮಾಡಿದ್ದ ಪಾಪ! ನಿಮಗೆ?" ಎಂದು ವಟಗುಡುತ್ತಿದ್ದಳು. ನನ್ನ ಹೆಂಡತಿ, ನಾನು ಕೇಳಿ ಆಶ್ಚರ್ಯಚಕಿತರಾದೆವು. ಅನಂತರ ಮತ್ತೆ ಬೀಗದ ಖಣ ಖಣ ಅವಾಜು ಸ್ಮಶಾನ ಮೌನ. ಆಮೇಲೆ ನಾವೆಲ್ಲ ಹೆದರಿ ಸುಮ್ಮನಾದೆವು. ಅನಂತರ ಮಾಳಿಗೆಯ ಮೇಲೆ ಎರಡು ಬೆಕ್ಕುಗಳು ಜಗಳವಾಡುವ ಧ್ವನಿ ಕೇಳಿತು. ಈ ಕಾಲಕ್ಕೆ ವಿದ್ಯುದ್ದೀಪ ಕೈ ಕೊಡಬೇಕೆ? ಮತ್ತೆ ಗಾಢಾಂಧಕಾರ ಭಯಾನಕ ಮೌನ!

ನಾನು ಹೇಗೊ ಹಾಸಿಗೆಯ ಬಳಿಗೆ ಬಂದು ಕಡ್ಡಿ ಕೊರೆದೆ. ಆ ಬೆಳಕಿನಲ್ಲಿ ನನ್ನ ಅತ್ತೆ, ಹೆಂಡತಿ ತೀರ ಬೆಳ್ಳಗೆ ಕಂಡರು. ಉಳಿದ ರಾತ್ರಿ ಮಲಗುವಲ್ಲಿ ನನಗೆ ತಥ್ಯ ಕಾಣಲಿಲ್ಲ. ಅವರಿಬ್ಬರನ್ನು ನನ್ನ ಕೊಠಡಿಗೆ ಕರೆದೊಯ್ದು ಮಲಗಿಸಿದೆ. ಶಾಲೆಯ ಮಕ್ಕಳಂತೆ ಅವರು ನನ್ನ ಹೇಳಿಕೆಯಂತೆ ನಡೆದುಕೊಂಡರು.

ಒಲಿಯಲ್ಲಿ ಬೆಂಕಿ ಮಾಡಿದೆ ಕಾಫಿ ತಯಾರಿಸಿದೆ ನಾನೇ ಮೊದಲು ಕುಡಿದು ನೋಡಿದೆ. ರಕ್ತದ ವಾಸನೆ ಅದಕ್ಕೆ! ಹೊರಗೆ ಚೆಲ್ಲಿ ತಣ್ಣೀರು ಕುಡಿದೆ. ಅದಕ್ಕೆ ವ್ಹಿಸ್ಕಿಯ ಅಮಲು!

ಕೊಠಡಿಗೆ ಬಂದು ನೋಡುತ್ತೇನೆ ನನ್ನ ಅತ್ತೆ ಹೆಂಡತಿ ಒಬ್ಬರನ್ನೊಬ್ಬರು ಗಟ್ಟಿಯಾಗಿ ಹಿಡಿದುಕೊಂಡು ಮಲಗಿದ್ದರು ಕಾಲ ಕಳೆಯಲೆಂದು ನಾನು ಡಿಕ್ಸನರಿಯನ್ನು ತೆಗೆದು ಅಲ್ಲಿಯ ಕೆಲವು ಶಬ್ದಗಳನ್ನು ಕಂಠ ಪಾಠ ಮಾಡತೊಡಗಿದೆ!

ನಸುಕು ಹರಿಯಲು ಸ್ನಾನಕ್ಕೆಂದು ನಾನು ಕೆರೆಯ ಕಡೆಗೆ ಹೋದೆ. ಅಲ್ಲಿ ಲಠ್ಠ ಮನುಷ್ಯನ, ತೆಳು ಮನುಷ್ಯನ ನೆರಳುಗಳು ಸಾಗಿದ್ದವು. ಅವು ನನ್ನೆಡೆಗೆ ಬರುವಂತೆ ಭಾಸವಾಯ್ತು. "ಅಯ್ಯೋ! ದೇವರೆ" ಎಂದು ಕೂಗಿ ಮನೆಯ ಬಾಗಿಲು ಇಕ್ಕಿ ಕೊಂಡೆ. ಅನಂತರ ಬೀಗದ ಸದ್ದು ಹಿಂದಿನಕ್ಕಿಂತಲೂ ಹೆಚ್ಚು ಸ್ಪಷ್ಟವಾಗಿ ಕೇಳತೊಡಗಿತು. "ಎಂಥ ವಿಷ ವೇಳೆ!" ಎಂದು ಶಪಿಸುತ್ತ ನಾನು ಮನೆಯ ಮಾಲಿಕನ ಬಳಿಗೆ ಬಂದೆ. "ಎಂಥ ಸುಡುಗಾಡು ಮನೆ ಕೊಟ್ಟೆಯಪ್ಪಾ! ಮಹಾತ್ಮಾ" ಎಂದು ಶಪಿಸಿದೆ. ಎಲ್ಲೆಡೆ ಪೂರ್ಣ ಬೆಳಕು ಹರಿಯಲು, ಪಕ್ಷಿಗಳ ಕಿಲ ಕಿಲ ನಿನಾದದೊಡನೆ ನನ್ನ ಭೀರುತನ ತೇಲಿ ಹೋಯ್ತು. ಅಂಗಾಂಗಗಳಲ್ಲಿ ನವ ಚೈತನ್ಯ ಸ್ಫುರಿಸಿತು.

ಹೆಂಗಸರ ಉಪಾಬರಿಯನ್ನು ಬಿಟ್ಟು ನಾನು ವೇಷ ಭೂಷ ಮಾಡಿಕೊಂಡು ನೆರೆಮನೆಗೆ ಹೋದೆ. ಆ ಮನೆಯೊಡೆಯ ನನಗೆ ಹಾರ್ದಿಕ ಸ್ವಾಗತ ಸಲ್ಲಿಸಿದ ನನ್ನನ್ನು ನಖಶಿಖಾಂತ ನಿರೀಕ್ಷಿಸಿದ; ನುಡಿದ—, ನಿಮಗೂ ಅಂಥಾದs ಅನುಭವ ಬಂತ? ಈ ಮನಿಗೆ ನೀವು ಹದಿನೇಳಯವರೊ ಹದಿನೆಂಟನೇಯವರೊ! ಆದರೂ ಹಿಂದಿನವರಕಿಂತ ಹೆಚ್ಚು ಚಾಣಾಕ್ಷ ಕಾಣಸ್ತೀರಿ— "ಎಂದು ಅಪಹಾಸ್ಯ ಮಾಡಿ ನನ್ನನ್ನು ಒಳಗೆ ಕರೆದೊಯ್ದ. ಅವನ ಹೆಂಡತಿ ಕೊಠಡಿಯಿಂದ ನನ್ನೆದುರು ಹಾಯ್ದು ಹೋಗುವಾಗ ನೋಡಿ ಬೆಚ್ಚಿಬಿದ್ದಳು. ಛೆ! ಗೊತ್ತಿಲ್ಲೇನು? ಇವರು ನಮ್ಮ ನೆರೆ ಹೊರೆಯವರು" —ಎಂದು ಅವನು ಹೆಂಡತಿಗೆ ಪರಿಚಯ ಮಾಡಿಸಿಕೊಟ್ಟ. ಆಕೆಗೆ ಇನ್ನು ಭಯ ಅನಿಸಿತು. "ಏನು! ಆದೆವ್ವನ ಮನ್ಯಾಗ ಇವರು ಎರಡು ದಿನ ಕಳೆದರಾ?" ಎಂದು ಆಕೆ ತನ್ನ ಕುತೂಹಲವನ್ನು ವ್ಯಕ್ತಗೊಳಿಸಿದಳು— ಚಿಕ್ಕ ಮಕ್ಕಳಂತೆ! ಅವರ ಕಥಿ ತೊಗೊಂಡು ಏನು ಮಾಡತಿ? ಒಳಗೆ ಹೋಗಿ ಚಹಾ ಮಾಡು

ಮೊದಲು" ಎಂದು 'ಹೆಂಡತಿಯ ಕಡೆಗೆ ಅವನು ತಿರುಸ್ಕಾರದ ನೋಟವನ್ನು ಬೀರಿದನು.

ಆಕೆ ಒಳಗೆ ಹೋದೊಡನೆ ನೆರೆಹೊರೆಯವ ತನ್ನ ಕಥೆ ಹೇಳಲನುವಾದ—" ನಾ ಈ ವಠಾರಕ್ಕೆ ಬಂದಾಗ ನೀವು ಬಂದ ಮನಿ ಖಾಲಿ ಇತ್ತು. ಒಬ್ಬ ಲಠ್ಠ ಶೇಟಜಿ ಅದರ ಮೂಲಕ ಇದ್ದ. ಈಗಿನ ಒಡೆಯ ಈ ಮನಿ ಮಾರಬೇಕಾದರ, ಮೊದಲ ಇದ್ದ ಒಬ್ಬ ತೆಳ್ಳಗ ವ್ಯಕ್ತಿನ್ನ ಬಿಡಿಸೊ ಕರಾರು ಹಾಕಿದ್ದ. ಕೆರೆಯ ಹತ್ತಿರ ಅವರ ಇಬ್ಬರ ನೆರಳು ಪ್ರತಿ ದಿನ ಓಡಾಡತಿರ ತಾವ. ನಿಮ್ಮ ಕಣ್ಣಿಗೆ ಬಿದ್ದವೊ ಇಲ್ಲೊ ಇಂದ, ನಿನ್ನೆ? ಒಂದು ದಿವಸ ಆ ಮೂಲಕ ಶೇಟಜಿ ಈ ಬಾಡಿಗಿದಾರಗ ಮನಿ ಬಿಡಸಲಿಕ್ಕೆ ಗಾಟು ಬಿದ್ದ. ಇವ ಬಿಡವಲ್ಲ. ಬೈದಾಟ ಆರಂಭ ಆಗಿ, ನಾ ಒಂದು ಅನ್ನು ನೀ ಒಂದು ಅನ್ನು ಅಂತ ಜಗಳ ವಿಕೋಪಕ್ಕೆ ಹೋತು. ಶೇಟಜಿ ಸಿಟ್ಟನ್ಯಾಗ ಬಾಡಿಗಿದಾರನ್ನ ಬೆದರಿಸಬೇಕು ಅಂತ ತನ್ನ ಕೈಯ್ಯಾಗಿನ ಕಟಿಗಿ ಅವನ ಕಡೆ ಬೀಸಿದಾ. ದುರ್ದೈವದಿಂದ ಅದು ತಲಿಗೆ ಬಡೀಬೇಕ? ಅದು ದಪ್ಪ ಹಿಡಿಕೆಯ ಕೋಲು ಮರ್ಮಸ್ಥಾನಕ್ಕೆ ಪೆಟ್ಟು ಬಿದ್ದು ಅವಾ ನೆಲಕ್ಕೆ ಬಿದ್ದಾ. ಮ್ಯೇಲಕ್ ಏಳಲೇ ಇಲ್ಲ! ಶೇಟಜಿ ಸಮಾಜದಾಗ ಪ್ರಭಾವಶಾಲಿ ವ್ಯಕ್ತಿ. ಪೋಲಿಸ ಕಛೇರಿಯ ವ್ಯವಹಾರ ಗೊತ್ತು. ಆ ಜನರಿಗೆ ಅಷ್ಟು ರೊಕ್ಕ ಕೊಟ್ಟು ಪಾರಾಗಬೇಕಾದರೆ ಮಸ್ತು ಮಸ್ತು ಆತು. ಈ ಮನಿಮಾರು, ಊರು ಬಿಟ್ಟ. ಅಂದಿನಿಂದ ನೋಡಿ, ಯಾವ ಬಾಡಗಿದಾರನೂ 24 ತಾಸಿನಕಿಂತ ಹೆಚ್ಚು ಇಲ್ಲ ಇಲ್ಲೆ. ಕ್ರೀಲಿ ಸಪ್ಪಳ ಕೇಳಿ ಕೇಳಿ ಹೆದರಿ ಮನಿಬಿಟ್ಟಾರ. ಇಲ್ಲೆ ಬಂದ ಕೆಲವರಿಗೆ ಸ್ಮೃತಿ ತಪ್ಪಿತು. ಕೆಲವರು ಹುಚ್ಚೆದ್ದು ಹರಿದಾಡಿದರು. ಕೆಲವರು ಇನ್ನೂ ಭ್ರಮಿಷ್ಠ ಆಗಿಯೇ ಇದ್ದಾರ. ನೀವು ಗಟ್ಟಿಗರು ನೋಡ್ರಿ. ಎರಡು ದಿನಾ ಆದರೂ ಮನ್ಯಾಗ ಕಳಿದಿರಿ! ಈ ಊರ ಪತ್ರಿಕಾದ ಸ್ವಂತ ಸುದ್ದಿಗಾರ ಬಂದು ಈ ಮನಿ ಹಕೀಕತ್ತು ನಮಗೆ ಹೇಳಿಹೋದ. ಬಾಡಿಗಿ ದರ ಇಳಿಸ್ಯಾರ ಆದರೂ ಇಂಥಾ ಗಟ್ಟಿ ಮುಟ್ಟಿ ಪೆಟಗಿಯಂಥಾ ಮನಿಗೆ ಯಾರೂ ಬರವಲ್ಲರು". ಇಷ್ಟು ಅವನು ಹೇಳಿ ಇನ್ನೂ ಹುರುಪಿನಲ್ಲಿರುವಾಗ ಅವನ ಹೆಂಡತಿ ನಮ್ಮಿಬ್ಬರಿಗೂ ಒಂದೊಂದು ಗ್ಲಾಸ್ ಚಹ ಕೊಟ್ಟು ಹೋದಳು. ಅನಂತರ ಟೋಸ್ಟ್. ಹಸಿದು ಕಂಗಾಲಾದ ನಾನು ತೋಳದಂತೆ ತಿಂದು ಮುಗಿಸಿದೆ. ಚಹ ಕುಡಿದು ಉತ್ತೇಜಿತನಾಗುವಾಗ ಅವನು ನುಡಿದ "ನೋಡ್ರಿ ನೀವು ಛಿಡಸ್ಥರ್ಗ್ಹಾಂಗ ಕಾಣವಲ್ಲರಿ ಬೇಕಾದರೆ ಆ ಮನಿ ಬಿಡಿಸಿ ಈಗ ನಿಮ್ಮ ಮನಿಯವರನು ನಮ್ಮೊ ಮನಿಗೆ ಕರಕೊಂಡು ಬರ್‍ರಿ ಇನ್ನೊಂದು ಚಲೋ ಮನಿ ಸಿಗೊತನಕ"

ಈ ಮಾತನ್ನು ಕೇಳಿ ಆನಂದ ತುಂದಿಲನಾದ ನಾನು ಮನೆಗೆ ಬಂದು ಹೆಂಡತಿ, ಅತ್ತೆಯನ್ನು ಎಬ್ಬಿಸಿದೆ. ಈ ಕಲ್ಯಾಣಿಕಾರಿ ವ್ಯಕ್ತಿಯ ಮನಿಯನ್ನು ತೆರವು ಮಾಡಿದೆ.

ಅನಂತರ ಮನೆಯೊಡೆಯನ ಬಳಿಗೆ ಹೋಗಿ ಕೀಲಿಕೈ ಮುಟ್ಟಿಸಿದೆ. ಮುಂಗಡ ಕೊಟ್ಟ ಹಣದ ವಿಷಯ ಎತ್ತೋ ದಡ್ಡತನ ಮಾಡಲಿಲ್ಲ. ಅವಾ ನನ್ನ ದುರು ದುರು ನೋಡಿ ನುಡಿದ "ಅಯ್ಯೋ! ಆ ಪ್ರಾಣಿ ಶೇಟಜಿ ನಿಮ್ಮನ್ನು ಸುಸೂತ್ರ ಬಿಡಲಿಲ್ಲ ಹಾಂಗಾರ."

ದಾಮಾನ ಶ್ರೋತೃವರ್ಗ ಗರ್ಕಾಗಿ ಕತೆಯನ್ನು ಕೇಳುತ್ತಿತ್ತು. ಮುಗಿದದ್ದೆ ಅವರ ಲಕ್ಷ್ಯಕ್ಕೆ ಬರಲಿಲ್ಲ! ಎಂತಹ ತನ್ಮಯತೆ.! (ಆಧರಿಸಿದುದು)—

# 'ಸಿದ್ಧಗಂಗಾ' ಚಿರಾಯುವಾಗಲೆಂದು

## ಹರಸಿ ಹಾರೈಸುವ ಆಜೀವ ಸದಸ್ಯರ ಬಳಗಕ್ಕೆ ಕೃತಜ್ಞತೆಗಳು

705 ಶ್ರೀ ಬಿ. ಎಂ. ಬಸಾಪುರ್
ಎಕ್ಸಿಕುಟಿವ್ ಇಂಜಿನಿಯರ್
ಬೆಳಗಾಂ

706 ಶ್ರೀ ಸಿದ್ಧಲಿಂಗಪ್ಪ, ಮರ್ಚೆಂಟ್
ತುಂಬಸೋಗೆ;
ಹೆಗ್ಗಡದೇವನಕೋಟೆ ತಾ॥
ಮೈಸೂರು ಜಿಲ್ಲೆ

707 ಶ್ರೀ ಟಿ. ಪಿ. ಜಗದೀಶ್
ಲೆಕ್ಕಪತ್ರ ವಿಭಾಗ,
ಇರಿಗೇಷನ್ ಕನ್‌ಸ್ಟ್ರಕ್ಷನ್‌ಡಿವಿಸನ್,
ಪ್ಯಾಲೆಸ್ ಆಫೀಸ್ ಬಿಲ್ಡಿಂಗ್,
ಮೈಸೂರು

708 ಶ್ರೀ ಕೆ. ಎ. ಚಂದ್ರಶೇಖರಪ್ಪ
ಸರಸ್ವತಿಪುರಂ ಡಬ್ಬಲ್ ರಸ್ತೆ,
ಟಿ, ಕೆ. ಲೇಔಟ್
ಮೈಸೂರು-9

709 ಶ್ರೀ ಟಿ. ಜಿ. ನಾಗರಾಜು, ಕಂಟ್ರಾಕ್ಟರ್,
ತುಂಬಸೋಗೆ,
ಹೆಗ್ಗಡದೇವನಕೋಟೆ ತಾ॥
ಮೈಸೂರು ಜಿಲ್ಲೆ

710 ಶ್ರೀ ಲೋಕೇಶ್ವರಯ್ಯ
S/o ಶ್ರೀ ಬಸಪ್ಪ
ಹೊನ್ನೆಬಾಗಿ,
ಚಿಕ್ಕನಾಯಕನಹಳ್ಳಿ ತಾ॥
ತುಮಕೂರು ಜಿಲ್ಲೆ

711 ಶ್ರೀ ಹೆಚ್. ಎನ್. ದಕ್ಷಿಣಾಮೂರ್ತಿ
S/o ಶ್ರೀ ಹೆಚ್. ಕೆ. ನಂಜಪ್ಪ
ಹೊನ್ನೆಬಾಗಿ,
ಚಿಕ್ಕನಾಯಕನಹಳ್ಳಿ ತಾ॥
ತುಮಕೂರು ಜಿಲ್ಲೆ

712 ಶ್ರೀ ಹೆಚ್. ಸಿ. ಕೆಂಪಲಿಂಗಯ್ಯ
ಹೊನ್ನೆಬಾಗಿ,
ಚಿಕ್ಕನಾಯಕನಹಳ್ಳಿ ತಾ॥
ತ ಮಕೂರು ಜಿಲ್ಲೆ

713 ಶ್ರೀ ಬಿ. ಆರ್. ರೇಣುಕ
ಶ್ರೀ ರೇಣುಕ ಕ್ಲಿನಿಕ್
ಅರಸೀಕೆರೆ
ಹಾಸನ ಜಿಲ್ಲೆ

714 ಶ್ರೀ ಜಿ. ಸಿ. ಮಲ್ಲೇಗೌಡ
ತಾ॥ ಬೋ॥ ಸದಸ್ಯರು
ಗೌಡನ ಕಟ್ಟೆ
ತಿಪಟೂರು ತಾ॥
ತುಮಕೂರು ಜಿಲ್ಲೆ

715 ಶ್ರೀ ಬಿ. ವಿ. ಗಂಗಾಧರಯ್ಯ, ಶಿಕ್ಷಕರು
ಗೌ॥ ಜ್ಯೂನಿಯರ್ ಕಾಲೇಜ್,
ಬಾಣಾವಾರ, ಅರಸೀಕೆರೆ ತಾ॥ ಹಾಸನ ಜಿಲ್ಲೆ

716 ಶ್ರೀಮತಿ ಸಿದ್ದಮ್ಮ
C/o ಶ್ರೀ ಎಂ. ದೊಡ್ಡಬಸಪ್ಪ
ಕಾಳಿಕಾ ದೇವಸ್ಥಾನ ರಸ್ತೆ,
ದಾವಣಗೆರೆ

(ಮುಂದುವರಿಯುತ್ತದೆ.)

LICENCED TO POST WITHOUT PRE PAYMENT LICENCE NO.3
Registred with theRegistrar of News papers for India under No. 17139/69
Reg No. KRN Q-9



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗ ... ಮಠ